# ಸಿದ್ಧಗಂಗಾ


ಸಂಪುಟ-೨೧ ಸಂಚಿಕೆ-೧೦ ಅಕ್ಟೋಬರ್ ೧೯೮೮


[ಕಳೆದ ಸಂಚಿಕೆಯಿಂದ]

## ಶ್ರೀ ಸಿದ್ಧಗಂಗಾ ಮಹಿಮ್ನ: ಸ್ತೋತ್ರ

—ಅಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

ಜಯಿಕೆ ಪಾವನ ಪುಣ್ಯ ಮೂರುತಿ
ಜಯಿಕೆ ಪುಣ್ಯಾರಣ್ಯ ದೀಧಿತಿ
ಜಯಿಕೆ ಶ್ರೀಕರ ಸಿದ್ಧಗಂಗಾಪೂತಮಹಿತಯುತಿ।
ಜಯಿಕೆ ವರದಾಸೋಹ ಸನ್ಮತಿ
ಜಯಿಕೆ ವಿದ್ಯಾದಾನ ಹಿತಮತ
ಜಯಿಕೆ ಶಿವಕುಮಾರಮುನಿಪತಿ ವಿಹಿತಧೀ ವಿತತಿ ॥

ಮಂಗಲಂ ಶ್ರೀ ಭಾರತಾಂಬೆಗೆ
ಮಂಗಲಂ ಕರ್ನಾಟಜನನಿಗೆ
ಮಂಗಲಂ ಶ್ರೀ ಸಿದ್ಧಗಂಗಾ ಕ್ಷೇತ್ರಪಾಲಕಗೆ।
ಮಂಗಲಂ ಸದ್ಭಕ್ತವೃಂದಕೆ
ಮಂಗಲಂ ವರಸಿದ್ಧಗಂಗೆಯ
ತುಂಗದುತ್ಸವ ಸಮಿತಿಸನ್ನುತ ವಿಬುಧಜನತತಿಗೆ ॥

ಭದ್ರಂ—ಶುಭಂ—ಮಂಗಲಮ್

# ಈ ಸಂಚಿಕೆಯಲ್ಲಿ





## ಶ್ರೀವಾಣಿ

### ಶಿವಾನುಭವ

ಶಿವಾನುಭವ ಗಹನಕ್ಕೆ ಗಹನ; ಸರಳಕ್ಕೆ ಸರಳ. ಶಿವಾನುಭವವನ್ನು ಎಲ್ಲರೂ ಅರಿತು ಆಚರಣೆಗೆ ತರುವುದು ಸಾಧ್ಯವಿಲ್ಲ ವೆಂಬ ಮಾತನ್ನು ಒಪ್ಪುವುದಕ್ಕಾಗುವುದಿಲ್ಲ. ದರ್ಶನಭಾಗ, ಸಿದ್ಧಾಂತಭಾಗ, ಶಾಸ್ತ್ರ ಮಥನಮಾಡದೆ ಶಿವಾನುಭವ ಅಳವಡುವುದಿಲ್ಲ ವೆಂದು ಯಾರಾದರೂ ತಿಳಿದಿದ್ದರೆ ಅದು ತೀರಾ ಸುಳ್ಳು. ಅದರಲ್ಲಿ ಸಾಮಾನ್ಯ ಮನುಷ್ಯ ನಿಗೂ ಕೂಡಾ ಆಸಕ್ತಿ ಬಂದರೆ ಸಾಕು, ಮುಗ್ಧರಾಗಿದ್ದರೂ ಶಿವಾನುಭಾವವನ್ನು ಅರ್ಥ ಮಾಡಿಕೊಂಡು ಅನುಭವಕ್ಕೆ ತಂದುಕೊಳ್ಳಬಹುದು. ಈ ಲೋಕದ ಯಥಾರ್ಥ ವಾದ ಅನುಭವವೇ ಶಿವಾನುಭವವೆನಿಸಿ ಕೊಳ್ಳುವುದು. ಸಮಗ್ರ ಬ್ರಹ್ಮಾಂಡವೇ ಶಿವಸ್ವ ರೂಪ ಆಸ್ತರೂಪವೇ ಪೂಜಾರ್ಹವಾದ ಲಿಂಗ. ಆಲಿಂಗವನ್ನು ದೀಕ್ಷಾ ವಿಧಿಯಿಂದಕರ ಸ್ಥಲಕ್ಕೆ ತಂದು ಕೊಟ್ಟಾತನೇ ಗುರುವು. ಹೀಗೆ ಗುರುವು ಕೊಟ್ಟ ಶಿವ ದೀಕ್ಷೆಯ ಗತಿ ಮತಿಗಳ ಸಮನ್ವಯ ಸಾಧನೆಯನ್ನು ಸಿದ್ಧ ಮಾಡಿಕೊಡುವ ಲಿಂಗದ ಚೈತನ್ಯ ಮುಖ ವೇ ಜಂಗಮ. ಈ ಗುರು ಜಂಗಮದ ಮೂಲಕ ಪಡೆಯುವುದೇ ಪಾದೋದಕ ಪ್ರಸಾದ, ಈ ಪ್ರಸಾದವನ್ನು ಲಿಂಗ ಭೋಗೋಪಭೋಗ ವೆಂದು ಭಾವಿಸುತ್ತ ಲೋಕ ದೊಡನೆ ಬಾಳುವ ವೀರಶೈವನ ನಡೆನುಡಿಗಳೇ ಶಿವಾನುಭವ ಎನಿಸುವುದು; ಸದ್ಗುಣ ಸತ್ಶೀಲ ಗಳಿಂದ ಕೂಡಿದ ಲೋಕ ಜೀವನ, ಶ್ರದ್ಧಾ ಭಕ್ತಿ ವಿಶ್ವಾಸ ಪೂರ್ಣವಾದ ಕಾರ್ಯ ಇವೆಲ್ಲ ಶಿವಾನುಭವದ ನರುಗುಂಪುಸುತ್ತೆತ್ತಲು ಬೀರಲಿಕ್ಕೆ ಸಹಾಯಕಗಳಾ ಗುತ್ತವೆ. ಬಸವಣ್ಣನವರು ಒಂದು ಕಡೆ ಯಾವ ಶಾಸ್ತ್ರ ಗ್ರಂಥಗಳ ಸಿದ್ಧಾಂತಗಳ ಪರಿಚ ಯವಿಲ್ಲದವರೂ ಶಿವಾನುಭವಕ್ಕೆ ಅರ್ಹರೆಂಬುದನ್ನು ಹೀಗೆ ಹೇಳಿದ್ದಾರೆ

ಆಳಿಗೊಂಡಹರೆಂದು ಅಂಜಲದೇಕೆ? ನಾಸ್ತಿಕ ವಾದಿಹರೆಂದು ನಾಚಲದೇಕೆ? ಆರಾದೊಡಾಗಲಿ ಶ್ರೀ ಮಹಾದೇವಂಗೆ ಶರಣೆನ್ನ. ಏನೂ ಅರಿಯೆನೆಂದು ಮೌನ ಗೊಂಡಿರ ಬೇಡ; ಕೂಡಲ ಸಂಗಮದೇವರ ಮುಂದೆ ದಂಡಣದತ್ತಣ ಎನ್ನಿ.

ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದರೆ ತಪ್ಪುವುವು ಅಪ ಮೃತ್ಯು ಕಾಲಕರ್ಮಂಗಳಯ್ಯಾ!


(51 ನೇ ಪುಟನೋಡಿ)

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಅಜೀವ ಸದಸ್ಯತ್ವ 201-00 ರೂ

1985 ನೇ ಜನವರಿಯಿಂದ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

"ಜನ ಶಕ್ತಿ ಎಚ್ಚತ್ತಿದೆ. ಈ ದೇಶದಲ್ಲಿ ರಾಷ್ಟ್ರಪತಿಯಾಗಲಿ, ಪ್ರಧಾನಿಯಾಗಲಿ, ಮುಖ್ಯಮಂತ್ರಿಗಳಾಗಲಿ, ಮಂತ್ರಿಗಳಾಗಲಿ, ರಾಜ್ಯಪಾಲರಾಗಲಿ ಎಲ್ಲರೂ ತಾವು ಜನ ಸೇವಕರು ಎಂದು ತಿಳಿದಷ್ಟೂ ಅವರಿಗೇ ಕ್ಷೇಮ." ಜ್ವಲಂತ ನಿದರ್ಶನ ಆಂಧ್ರದಲ್ಲಿ ನಡೆದ ಪ್ರಜಾ ಸತ್ತೆಯ ಕೋಲಾಹಲ. ಈ ಜನ ಜಾಗೃತಿಗಾಗಿ ಶತಶತಮಾನಗಳಲ್ಲಿ ಹೋರಾಟ ತೆರೆದಿಟ್ಟ ಪುಸ್ತಕ. ಜಗತ್ತಿನ ಆಲೋಚನ ಸರಣಿಯನ್ನೇ, ಬದುಕಿನ ಗತಿಯನ್ನೇ ಬದಲಿಸಿದ ಮಹಾಪುರುಷರು ಕೇವಲ ಕೆಲವರು ಮಾತ್ರ–ಒಬ್ಬ ಬುದ್ಧ, ಒಬ್ಬ ಬಸವ ಒಬ್ಬ ಗಾಂಧಿ.

ಅಕ್ಟೋಬರ್ 2. ಗಾಂಧೀ ಜಯಂತಿ. ಯುಗಪ್ರವರ್ತಕನ ಜನ್ಮದಿನ." ಗಾಂಧೀಜಿ ಎಂದರೆ ಒಬ್ಬ ವ್ಯಕ್ತಿಯಲ್ಲ. ಅದು ಒಂದು ಪಂಥ ಶಿಲ್ಪದಲ್ಲಿ ಜಕಣಾಚಾರಿ ಇದ್ದ ಹಾಗೆ." ಹೌದು. ಅದೊಂದು ಸತ್ಯ, ಅಹಿಂಸೆ, ರಾಷ್ಟ್ರಪ್ರೇಮದ ಹಾದಿ. ಆ ಹೆದ್ದಾರಿಯಲ್ಲಿ ನಡೆಯಬೇಕಾದರೆ ಎಂಟೆದೆ ಬೇಕು. ಅಂಥವರು ಇಲ್ಲದಿಲ್ಲ. ಸಂಖ್ಯೆ ಕಡಿಮೆ ಅಷ್ಟೆ." ಗಾಂಧೀಜಿಯವರನ್ನು ಹೀಗೆ, ಅವರು ಇಂಥವರು, ಎಂದು ಹೇಳಲು ಯಾರಿಗಾದರೂ ಎದೆ ಬಹಳ ಬೇಕು. ಅವರನ್ನು ನೆನೆದರೆ ಬೇರೆ ಬೇರೆ ಚಿತ್ರ ಕಣ್ಣ ಮುಂದೆ ನಿಂತಾವು, ನಾನಾ ಭಾವ ಮನಸ್ಸಿನಲ್ಲಿ ಮೂಡಿಯಾವು. ಕೆಲವರಿಗೆ ನಗೆಗಾರ ಗಾಂಧೀನೆನಪಾದರೆ ಕೆಲವರಿಗೆ ಹಟಗಾರ ಗಾಂಧಿಯ ನೆನಪಾಗುತ್ತದೆ. ಒಬ್ಬರಿಗೆ ಶುದ್ಧ ಬೈರಾಗಿ, ಇನ್ನೊಬ್ಬರಿಗೆ ಉತ್ತಮ ಗೃಹಸ್ಥ. ಚಾಣಾಕ್ಷ ರಾಜಕಾರಣಿ ಎಂದು ಕೆಲವರಿಗೆ, ಖಾದಿಗೊಡ್ಡು ಎಂದು ಕೆಲವರಿಗೆ. ಜಗದ್ವಂದ್ಯ ಕರ್ಮಯೋಗಿ ಎಂದು ಕೆಲವರಿಗೆ ಅನಿಸಿದರೆ ಬರೀ ಹುಚ್ಚು ಎಂದುಕೆಲವರು ತಿಳಿದಿದ್ದಾರೆ. ಒಟ್ಟಿನಲ್ಲಿ ಗಾಂಧೀಜಿ ಬಹುರೂಪಿ. ಒಬ್ಬೊಬ್ಬರದು ಒಂದು ನೋಟ. ಎಲ್ಲರೂ ಆನೆಯನ್ನು ಮುಟ್ಟಿದವರೇ!

ಭಾರತೀಯ ಸಂಸ್ಕೃತಿಯ ಸಾಕಾರರೂಪ ಆ ಮಹಾಜೀವ. ಅವರು ನಡೆದ ಹಾದಿಯೂ ಅಷ್ಟೇ; ಒಂದು ಚಳುವಳಿಯಲ್ಲ ಒಂದು ಕೆಲಸವಲ್ಲ. ಕಡೆಗೆ ಒಂದು ದೇಶವೂ ಅಲ್ಲ. ಸಾಧನೆಯ ಮಾರ್ಗವೂ ಎಂಥದು? ಒಂದು ಖಾದೀಯೆ; ಒಂದು ಹರಿಜನ ಸೇವೆಯೆ; ಅಸಹಕಾರವೇ, ಶಾಸನೋಲ್ಲಂಘನವೆ; ಸಹಕಾರವೆ, ಶಾಸನನಿರ್ಮಾಣವೆ! ಬಹಿಷ್ಕಾರವೆ, ಉಪವಾಸವೆ; ಬ್ರಹ್ಮಚರ್ಯವೆ, ಭಕ್ತಿಯೆ? ಒಂದು ವಿಧವಲ್ಲ, ಒಂದು ರೂಪವಲ್ಲ. ಇಂಥ ಪುಣ್ಯಮೂರ್ತಿಯ ಜನ್ಮದಿನಾಚರಣೆಯಂದು ಭಾರತೀಯರೆಲ್ಲ ಸಂಕಲ್ಪ ಮಾಡಬೇಕಾಗಿದೆ. ಸಂಕಲ್ಪ ಭಾವಚಿತ್ರ ಅನಾವರಣ ಮಾಡುವುದಲ್ಲ, ಹೂಮಾಲೆ ತೊಡಿಸುವುದಲ್ಲ, "ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ"

ಗಾಂಧೀಜಿಯ ಜೀವನದ ಶಕ್ತಿಯ ಸೆಲೆ ಎಲ್ಲಿದೆ, ಯಾವುದು ಎಂಬುದನ್ನರಿತು ಆಚರಣೆಗೆ ತರುವ ಸಂಕಲ್ಪ ನಮ್ಮದಾಗಬೇಕು. "ಪ್ರಾರ್ಥನೆ ಇಲ್ಲದೆ ಗಾಂಧೀಜಿಗೆ ದಿನಬೆಳಗಾಗುವುದಿಲ್ಲ. ಒಂದು ದಿನ ಕೋಳಿಕೂಗದೆ ಬಿಟ್ಟರೂ ಬಿಟ್ಟೀತು. ಗಾಂಧೀಜಿಯ ಪ್ರಾರ್ಥನೆ ಮಾತ್ರ ನಿಲ್ಲಬಾರದು." ಪ್ರಾರ್ಥನಾ ಬಲವೇ ಅವರಿಗೆ ಪರಮ ಬಲ. ಏಕೆಂದರೆ ಪ್ರಾರ್ಥನೆ ದಿನ ದಿನದ ಆತ್ಮನಿವೇದನ.

ಗಾಂಧೀಜಿ ಪ್ರೀತಿಸಿದ್ದು, ಅಭಿವೃದ್ಧಿಗೊಳಿಸಲು ಶ್ರಮಿಸಿದ್ದು ಹಿಂದೂಸ್ಥಾನದ ಹಳ್ಳಿಗಳನ್ನು. ನಮ್ಮ ದೇಶದ ಆತ್ಮ ಹಳ್ಳಿಗಳಲ್ಲಿದೆ ಎನ್ನುತ್ತಿದ್ದರು. ಸಭೆ, ಸಮ್ಮೇಳನಗಳಿಗೆ ಹೋದಾಗ ಅವರು ಉಳಿದುಕೊಳ್ಳುತ್ತಿದ್ದುದು, ಪಂಚತಾರಾ ಹೋಟೆಲ್‌ಗಳಲಲ್ಲ. ಹವಾನಿಯಂತ್ರಿತ ಕೊಠಡಿಗಳಲಲ್ಲ, ಹರಿಜನರ ಕೇರಿಗಳಲ್ಲಿ, ಗುಡಿಸಲುಗಳಲ್ಲಿ. ಆದರೆ ಹರಿಜನೋದ್ಧಾರದ ಮಾತನಾಡುತ್ತಿರುವ ಇಂದಿನ ನಮ್ಮ ನಾಯಕರ ನಡೆ-ನುಡಿಗಳಲ್ಲಿ ಯಾವ ಅಂತರ? ಗಾಂಧೀ ಜಯಂತಿ ಆಚರಣೆಯಲ್ಲೂ ಇವರಿಗೆ ಇಂದ್ರಭೋಗ ಇರಲೇಬೇಕು. ಗಾಂಧೀ ಭಕ್ತರು ಇಂದು ಎಷ್ಟು ಜನ ಸಿಕ್ಕರು? ಹಗಲುಹೊತ್ತು ಪಂಜು ಹಿಡಿದು ಹುಡುಕಬೇಕಾಗಿದೆ. ಆ ಪುಣ್ಯಾತ್ಮ ಹುಟ್ಟಿದ ನೆಲದಲ್ಲೇ ಇಂದು ಕರಾಳನೃತ್ಯ "ಬಡತನದಲ್ಲಿ ಮುಳುಗಿ ನಿರುದ್ಯೋಗದಿಂದ ಸವೆದು ಹೋಗುತ್ತಿರುವ ಜನಕ್ಕೆ ದೇವರೇ ಪ್ರತ್ಯಕ್ಷವಾಗಿ ಬಂದರೂ ಅನ್ನಾವತಾರ ಮಾಡಿ ಬರಬೇಕು"–ಎಂಬ ಮಾತು ಗಾಂಧೀಜಿಯವರದು. ಆದರೆ ಇಂದು ನಡೆದಿರುವುದೇನು? ಗಾಂಧೀ ಜಯಂತಿಯಂದಾದರೂ ಆಲೋಚನೆ ಮಾಡಬೇಡವೆ? ಗಾಂಧಿಯ ಹೆಸರಿನಲ್ಲಿ ಪದವಿ, ಪಟ್ಟಗಳ ಅಟ್ಟಹಾಸ ಇಂದು! ಆ ಜೀವನ ನಿಷ್ಠ ಕಲಾವಿದ ನಮ್ಮ ಇರುವಿಕೆಯ ರೀತಿ-ರಿವಾಜುಗಳಿಂದ ಕಣ್ಣೀರು ಸುರಿಸಿದರೆ ಅದರ ಕಾರಣಕರ್ತರು ನಾವೆ. ಅವರಿಗೆ ಜೀವನವು ಸಮಸ್ತ ಕಲೆಗಳಿಗಿಂತ ಶ್ರೇಷ್ಠವಾದುದು. ಯಾರು ಉತ್ತಮ ರೀತಿಯಲ್ಲಿ ಬಾಳಬಲ್ಲನೋ ಅವನೇ ಉತ್ತಮ ಕಲೆಗಾರ. ಉತ್ತಮ ಜೀವನದ ತಳಹದಿಯಿಲ್ಲದೆ ಕಲಾಕೃತಿ ಹೇಗೆ ಆದೀತು? ಬಾಳನ್ನು ಹಸನು ಮಾಡುವುದು, ಮೇಲುಮಟ್ಟಕ್ಕೆ ಏರಿಸುವುದು ಕಲೆಯ ಬೆಲೆ. ಜೀವನವೇ ಶ್ರೇಷ್ಠ ಕಲೆ. ಬಾಳು ಮಹಾ ನಿಗೂಢ ರಹಸ್ಯ, ದೇವರು ಕೊಟ್ಟ ದಿವ್ಯ ದಾನ. ಅದನ್ನೂ ಗೌರವಿಸಬೇಕು ಎನ್ನುತ್ತಿದ್ದರು ಗಾಂಧೀಜಿ. ಆದರೆ ನಡೆದಿರುವುದೇನು? "ಕಿರಾತರು ಹುಟ್ಟಿ ಪುರಾತರು ಅಡಗಿದರು". ಎಂಬ ಜ್ಞಾನಿ ಚೆನ್ನಬಸವಣ್ಣನವರ ಸತ್ಯವಾಕ್ಯ. ಪ್ರಜಾಪ್ರಭುತ್ವದ ಸತ್ವಪರೀಕ್ಷೆ ಆಗಾಗ ನಡೆದಿದೆ. ನಡೆಯಬೇಕು. ಅದು ಘನತೆ. ಗಾಂಧೀಜಿಯಂಥ ಮಹಾತ್ಮರು ನಡೆದ ಮಹಾಪಥ. ಕವಿಯುವ ಮೌಢ್ಯಗಳಿಗೆ, ಆವರಿಸುವ ಅಹಂಕಾರದ ದಪ್ಪ ಪರದೆಗಳಿಗೆ, ಹೆಪ್ಪುಗಟ್ಟುವ ಅಮಾನವೀಯ ಮೌಲ್ಯಗಳಿಗೆ ಬಸವ-ಗಾಂಧೀಜಿಯವರ ಸಂದೇಶವೇ, ಜೀವನ ಕ್ರಮವೇ ದಾರಿದೀಪ, ಅದೊಂದೇ.



# ★ ನವನೀತ ★

1. ಸುಕ್ಷೇತ್ರೆ ವಾಪಯೇದ್ಬೀಜಂ ಸುಪುತ್ರೇ ದಾಪಯೇದ್ಧನಂ ।
ಸುಕ್ಷೇತ್ರೇ ಚ ಸುಪುತ್ರೇ ಚ ಯತ್ ಕ್ಷಿಪ್ತಂ ನೈವ ನಶ್ಯತಿ ॥

—ಪರಾಶರಸ್ಮೃತಿ

ಫಲವತ್ತಾದ ನೆಲದಲ್ಲಿ ಬೀಜವನ್ನು ಬಿತ್ತಬೇಕು. ಗುಣಶಾಲಿಯಾದ ಮಗನಿಗೆ ಹಣವನ್ನು ಕೊಡಬೇಕು. ಒಳ್ಳೆಯ ನೆಲದಲ್ಲಿ ಬಿತ್ತಿದ್ದು, ಒಳ್ಳೆಯ ಮಗನಲ್ಲಿ ಕೊಟ್ಟಿದ್ದು ಎಂದಿಗೂ ನಾಶವಾಗುವುದಿಲ್ಲ.

2. ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೇ ॥
ಏಕೋಽನುಭುಂಕ್ತೇ ಸುಕೃತಂ ಏಕಏವ ಚ ದುಷ್ಕೃತಮ್ ॥

—ಮನುಸ್ಮೃತಿ

ಮನುಷ್ಯನು ಒಂಟಿಯಾಗಿ ಹುಟ್ಟುತ್ತಾನೆ. ಒಂಟಿಯಾಗಿಯೇ ಸಾಯುತ್ತಾನೆ. ಹಾಗೆಯೇ ಪುಣ್ಯದ ಫಲವನ್ನೂ ಅನುಭವಿಸತಕ್ಕವನು ಅವನೊಬ್ಬನೇ.

3. ದುರ್ಲಭಂ ತ್ರಯಮೇವೈತದ್ದೈವಾನುಗ್ರಹ ಹೇತುಕಂ ।
ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷ ಸಂಶ್ರಯ ॥

—ವಿವೇಕ ಚೂಡಾಮಣಿ

ಮನುಷ್ಯ ಜನ್ಮ, ಮೋಕ್ಷಾಭಿಲಾಷೆ, ಮಹಾ ಜನರ ಸಂಸರ್ಗ ಇವು ಮೂರು ದುರ್ಲಭ. ಅದು ದೈವಾನುಗ್ರಹದಿಂದ ದೊರೆಯತಕ್ಕದ್ದು.

# ಚಿಂತನ–೧

—ಬಿ. ವೀರಭದ್ರಯ್ಯ

ಮಾಧುರ್ಯ ಮತ್ತು ಪ್ರಕಾಶದಿಂದ ಕೂಡಿರುವ ಜೀವನವೇ ಸಂಸ್ಕೃತಿಯ ಜೀವನವೆಂದು ಮಹಾನ್ ಚಿಂತಕ ಮ್ಯಾಥ್ಯೂ ಆರ್ನಾಲ್ಡ್‌ರವರು ತಿಳಿಸಿದ್ದಾರೆ. ಸಮಾಜದ ಹಿತಚಿಂತನೆಯಲ್ಲಿ, ಜೀವ ಕಾರುಣ್ಯಭಾವದಿಂದ ಬದುಕುವವರೇ ನಿಜವಾದ ಮಾನವರು. ಅವರ ಜೀವನ ಪ್ರೇಮಮಯವಾಗಿ, ವಾತ್ಸಲ್ಯಮಯವಾಗಿರುತ್ತದೆ. 'ಉದಾರ ಚರಿತರಿಗೆ ವಸುಧೆಯೇ ಕುಟುಂಬ'. ಮಹಾನುಭಾವಿ ಬಸವಣ್ಣನವರು ತಮ್ಮ ಒಂದು ವಚನದಲ್ಲಿ

ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ,
ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ,
ಕೂಡಲ ಸಂಗಮದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯಾ

ಎಂದು ಇಡೀ ಮಾನವ ಸಮಾಜವನ್ನೇ ಬಂಧುತ್ವದ ಭಾವನೆಯಿಂದ ಕಾಣಲು ಮಾರ್ಗ ತೋರಿದ್ದಾರೆ. ಈ ರೀತಿಯ ವಿಶ್ವಮೈತ್ರಿಯ ಭಾವನೆ ಬೆಳೆಯಲು ನಾವು ನಮ್ಮ ನಡೆ-ನುಡಿಗಳನ್ನು, ಹೃದಯದ ಭಾವನೆಯನ್ನು ರೂಪಿಸಿಕೊಳ್ಳಬೇಕು.

ನಾವು ಸಮಾಜ ಜೀವಿಗಳಾಗಿರುವ ಕಾರಣ ಅನೇಕ ಜನರೊಡನೆ ಸಂಪರ್ಕ ಬೆಳೆಸಬೇಕಾಗುತ್ತದೆ. ಅವರೊಡನೆ ಕೂಡಿ ಬಾಳುವೆ ಮಾಡುವಲ್ಲಿ ಮಾಧುರ್ಯದಿಂದ ನಡೆದುಕೊಳ್ಳಬೇಕು. ಬಸವಣ್ಣನವರು 'ಅಯ್ಯಾ ಎಂದೊಡೆ ಸ್ವರ್ಗ; ಎಲವೋ ಎಂದೊಡೆ ನರಕ' ಎಂದಿರುವರು. ಅಯ್ಯಾ, ಅಕ್ಕ, ಅಣ್ಣ ಎಂದು ಗೌರವ ಕೊಟ್ಟು ಮಾತನಾಡಿಸಿದರೆ ಅವರ ಮನಸ್ಸು ಪ್ರೀತಿಯಿಂದ ಹಿಗ್ಗಿ ಅರಳುತ್ತದೆ. ಪ್ರೀತಿಯಿಂದ ವಿಶ್ವಾಸ, ಆತ್ಮೀಯತೆ ಬೆಳೆದು ಕಾರ್ಯ ಯಶಸ್ಸಿಗೆ ಅನುಕೂಲವಾಗುತ್ತದೆ. ಅದಕ್ಕೆ ಬದಲಾಗಿ ಏನೋ, ಎಲವೋ ಎಂದು ಶೀವಿಯಿಂದ ಬೇಗಿ ನುಡಿದರೆ ಅವರಲ್ಲಿ ನಮ್ಮ ಬಗ್ಗೆ ಪ್ರೀತಿ ವಿಶ್ವಾಸ ಮಾಯವಾಗಿ ತಿರಸ್ಕಾರ, ಅಸಹನೆ, ಕ್ರೋಧ ಉಂಟಾಗಬಹುದು, ಆದ್ದರಿಂದಲೇ ಮೃದು ವಚನವೇ ಸಕಲ ಜಪಂಗಳಯ್ಯ! ಮೃದು ವಚನವೇ ಸಕಲ ತಪಂಗಳಯ್ಯ! ಎಂದಿದ್ದಾರೆ ಶರಣರು.

ಚೈನಾ ದೇಶದ ಪ್ರಸಿದ್ಧ ದಾರ್ಶನಿಕ ಕನ್‌ಫ್ಯೂಷಿಯಸ್ ಮಹಾಶಯನೂ ಸಹ ಸವಿಮಾತಿನ ಆವಶ್ಯಕತೆಯ ಬಗ್ಗೆ ತನ್ನದೇ ಆದ ವಿಲಕ್ಷಣ ರೀತಿಯಲ್ಲಿ ಅದನ್ನು ಅರುಹಿದ್ದಾನೆ. ಒಮ್ಮೆ ನಾಲ್ಕು ಜನ ಶಿಷ್ಯರಿಗೆ ಪಾಠ ಹೇಳಿಕೊಡುತ್ತಿದ್ದ ಸಮಯದಲ್ಲಿ ಒಂದು



ಮಗು ಅಲ್ಲಿಗೆ ಬಂದಿತು. ಗುರು ಆ ಮಗುವಿನ ಮೈದಡವಿ, ಮಗೂ, ನನಗೆ ಹಲ್ಲಿದೆಯೇ ಎಂದು ಪ್ರಶ್ನೆ ಕೇಳಿದನು. ಮಗು ಗುರುವಿನ ಬಾಯಿ ತೆಗೆಸಿ ನೋಡಿ, ಇಲ್ಲ ತಾತ ನಿನ್ನ ಬಾಯಿ ಬೊಚ್ಚು ಬಾಯಿ ಎಂದಿತು. ಇನ್ನೂ ಸ್ವಲ್ಪ ಹೊತ್ತಾದ ಬಳಿಕ ಅದೇ ಮಗುವನ್ನು ಕುರಿತು ಗುರು ಮತ್ತೆ ಕೇಳಿದ, ನನಗೆ ನಾಲಿಗೆಯಿದೆಯೇ ಎಂದು? ಕನ್‌ಫ್ಯೂಷಿಯಸ್ ಗುರುವಿನ ಬಾಯಿಯನ್ನು ತೆಗೆಸಿ ಮಗು ಹೇಳಿತು. ತಾತ ನಿನಗೆ ನಾಲಗೆ ಇದೆಯೆಂದು. ಮೌನಿಯಾದ ಗುರು ಕೆಲ ಸಮಯದನಂತರ ಶಿಷ್ಯರನ್ನು ಕೇಳಿದರು; ನಿಮಗೆ ಅರ್ಥವಾಯಿತೆ ಎಂದು. ವಿದ್ಯಾರ್ಥಿಗಳು ಅರ್ಥವಾಗಲಿಲ್ಲವೆಂದು ತಮ್ಮ ತಲೆಯಲ್ಲಾಡಿಸಿದರು. ಆಗ ಗುರುಗಳು ಹೇಳಿದರು: 'ನೋಡಿ ಶಿಷ್ಯರೇ, ಕಚ್ಚುವ ಕಡಿಯುವ ಒರಟು ಸ್ವಭಾವ ಹಲ್ಲಿನದು. ಅದು ಬೇಗ ಬಿದ್ದು ಹೋಗುತ್ತದೆ. ಹಾಗೆಯೇ ಒರಟು ಸ್ವಭಾವದ ಜನರೂ ಬೇಗ ನಾಶವಾಗುವರು. ಆದರೆ ಮೃದುವಾದ ಮೆದುವಾದ ನಾಲಗೆ ದೀರ್ಘಕಾಲ ಉಳಿಯುವಂತೆ ಮಧುರತರವಾದ ಮಾತು ದೀರ್ಘಕಾಲ ಬಾಳುತ್ತದೆ. ಅಂತೆಯೇ ಮೃದುಮಧುರ ಮಾತುಗಳು ದೀರ್ಘಕಾಲ ಬಾಳುತ್ತವೆ' ಎಂದು ಬೋಧಿಸಿದರು.

ಶರಣರಂತೂ 'ನುಡಿ'ಯು 'ನಡೆ'ಗೆ ಮಾರ್ಗದರ್ಶಕವೆಂದೂ, ಜ್ಞಾನ ಮತ್ತು ಕ್ರಿಯೆ ಸಮರಸಾತ್ಮಕವಿರಬೇಕೆಂದೂ ಹೇಳಿದ್ದಾರೆ. ನುಡಿಗೆ ತಕ್ಕ ನಡೆಯಿಲ್ಲದವರನ್ನು ದೇವನು ಮೆಚ್ಚನೆಂದೂ ಹೇಳಲು ಅವರು 'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ, ಹಿಡಿದಿಪ್ಪ ಘನಲಿಂಗ ಘಟಸರ್ಪ ನೋಡಾ' ಎಂದು ಎಚ್ಚರಿಸಿದ್ದಾರೆ. ಆದ್ದರಿಂದಲೇ 'ನುಡಿ'ಯ ಬಗ್ಗೆ ಎಚ್ಚರವಿರಬೇಕು. ನುಡಿಯ ಆದರ್ಶದ ಬಗ್ಗೆ ಶರಣರು ಹಿರಿದಾದ ಮಾರ್ಗದರ್ಶನವನ್ನು ನಮಗೆ ನೀಡಿದ್ದಾರೆ. ಅದೆಂದರೆ ಅನುಭವದ ಅಂತರಾಳಕ್ಕಿಳಿದು ಚಿರಂತನ ಸತ್ಯದ ದರ್ಶನದಿಂದ ತೊಳಗಿಬೆಳಗುವ ಅಮೂಲ್ಯವಾದ 'ಮುತ್ತಿನಹಾರ'ದಂತೆಯೂ, ಪಾರದರ್ಶಕವಾಗಿ ಸತ್ಯವನ್ನು ತೋರಿಸುವ 'ಸ್ಫಟಿಕದ ಶಲಾಕೆ'ಯಂತೆಯೂ ಸ್ವಯಂ ಪ್ರಕಾಶವಾಗಿ ಬೆಳಗುವ 'ಮಾಣಿಕ್ಯದ ದೀಪ್ತಿ'ಯಂತೆಯೂ, ಎಲ್ಲಕ್ಕಿಂತ ಮಿಗಿಲಾಗಿ ನಮ್ಮ ಮಾತು 'ಲಿಂಗ' ಅಂದರೆ ದೇವದೇವ ಮಹಾದೇವನು ನಮ್ಮ ಮಾತು ಪರಮ ಸತ್ಯವೆಂದು 'ಮೆಚ್ಚಿ ಅಹುದು ಅಹುದು' ಎಂದು ತಲೆದೂಗುವಂತಿರಬೇಕೆಂದು ಹೇಳಿದ್ದಾರೆ.

ಈ ಘನ ಆದರ್ಶದ ಬೆಳಕಿನಲ್ಲಿ ನಾವು ನಮ್ಮ ನಡೆನುಡಿಯನ್ನು ಸರಿಪಡಿಸಿಕೊಳ್ಳಲು ಪ್ರಯತ್ನಿಸುವುದರಿಂದ ಪ್ರಕಾಶ ಮತ್ತು ಮಾಧುರ್ಯದ ಜೀವನ ನಮ್ಮದಾಗುತ್ತದೆ.

# ಕ್ಷೇತ್ರವಾರ್ತೆ

ದಿನಾಂಕ 30-8-84 ರಂದು ಶ್ರೀ ಕ್ಷೇತ್ರದ ಸಂಯುಕ್ತ ವಿದ್ಯಾರ್ಥಿಸಂಘದ ಆಶ್ರಯದಲ್ಲಿ ಶ್ರೀ ವಿದ್ಯಾ ಗಣಪತಿಯನ್ನು ಪ್ರತಿಷ್ಠಾಪನೆ ಮಾಡಲಾಯಿತು. ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಗಣಪತಿಗೆ ಪೂಜಾ ಕಾರ್ಯಕ್ರಮಗಳು ನೆರವೇರಿದವು. ಕಿರಿಯ ಶ್ರೀಗಳವರು ಭಾಗವಹಿಸಿದ್ದರು

ಶ್ರೀ ಮಠದ ಹಳೆಯ ವಿದ್ಯಾರ್ಥಿಗಳಾದ, ನಿವೃತ್ತ ಅಧ್ಯಾಪಕರಾದ ಶ್ರೀ ಸಿ. ಬಿ. ಶಂಕರಪ್ಪನವರು, ಪೂಜ್ಯ ಶ್ರೀ ಶ್ರೀಗಳವರ ಮಹಾಮಣಿಹದಲ್ಲಿ ತಮ್ಮ ಅಳಿಲು ಭಕ್ತಿಯ ಕುರುಹಾಗಿ ತಾ|| 2-9-84 ರಂದು ಬೆಂಗಳೂರು ಪುಟ್ಟಣ್ಣ ಚೆಟ್ಟಿ ನಗರಭವನದಲ್ಲಿ ಜಗಜ್ಯೋತಿ ಬಸವೇಶ್ವರ ನಾಟಕ ಅಭಿನಯಿಸಿದ ಸಂದರ್ಭದಲ್ಲಿ ಆತ್ಮ ಸಂತೋಷದಿಂದ ಐದುನೂರು ರೂಪಾಯಿಗಳನ್ನು ಅರ್ಪಿಸಿದರು. ಶ್ರೀಯುತರಿಗೆ 'ಸಿದ್ಧಗಂಗಾ' ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತದೆ.

ದಿನಾಂಕ 5-9-84 ರಂದು ಶ್ರೀ ಶ್ರೀ ಗೌರೀಶಂಕರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಶಿಕ್ಷಕರ ದಿನಾಚರಣೆಯನ್ನು ಆಚರಿಸಲಾಯಿತು.

ದಿನಾಂಕ 6-9-84 ರಂದು ಚಲನಚಿತ್ರ ನಟ ಶ್ರೀ ಉದಯಕುಮಾರವರು ವಿಶೇಷ ಆಹ್ವಾನಿತರಾಗಿದ್ದರು. ದಿನಾಂಕ 30-8-84 ರಿಂದ 6-9-84 ರ ವರೆಗೆ ಅನೇಕ ವಿದ್ವಾಂಸರುಗಳನ್ನು ಕರೆಸಿ ವಿದ್ಯಾರ್ಥಿಗಳಿಗೆ ಉಪನ್ಯಾಸಗಳನ್ನು ಕೊಡಿಸಲಾಯಿತು. ದಿನಾಂಕ 7-9-84 ರಂದು ಶ್ರೀ ಶ್ರೀಗಳವರ ಆಶೀರ್ವಚನದೊಂದಿಗೆ ಗಣಪತಿಯ ವಿಸರ್ಜನೆಯನ್ನು ಮಾಡಲಾಯಿತು. ಸಮಾರಂಭದಲ್ಲಿ ಭಾಗವಹಿಸಿದ್ದ ವಿದ್ಯಾರ್ಥಿಗಳಿಗೆ ಮತ್ತು ಭಕ್ತಾದಿಗಳಿಗೆ ಸಿಹಿತಿಂಡಿ ಹಂಚಲಾಯಿತು.

ದಿನಾಂಕ 8-9-84 ರಂದು ಸಂಸ್ಕೃತೋತ್ಸವ ಸಮಾರಂಭದ ಅಂಗವಾಗಿ 'ಶಾಸ್ತ್ರ ವಿಚಾರ ಗೋಷ್ಠಿ' ಯನ್ನು ಶ್ರೀ ಕ್ಷೇತ್ರದಲ್ಲಿ ಏರ್ಪಾಡು ಮಾಡಲಾಗಿತ್ತು. ಗೋಷ್ಠಿಯ ಅಧ್ಯಕ್ಷತೆಯನ್ನು 'ಸುಧರ್ಮಾ' ಸಂಸ್ಕೃತ ದಿನಪತ್ರಿಕೆಯ ಸಂಪಾದಕರಾದ ಕೆ.ಎನ್. ವರದರಾಜ ಐಯ್ಯಂಗಾರ್‌ರವರು ವಹಿಸಿದ್ದರು. ಮೈಸೂರಿನಿಂದ ಬಂದ ಅನೇಕ ವಿದ್ವಾಂಸರುಗಳು ಗೋಷ್ಠಿಯಲ್ಲಿ ಭಾಗವಹಿಸಿದ್ದರು.

ದಿನಾಂಕ 10-9-84 ರಂದು ಸಂಸ್ಕೃತೋತ್ಸವದ ಅಂಗವಾಗಿ ಏರ್ಪಾಟು ಮಾಡಿದ್ದ ಸಾರ್ವಜನಿಕ ಸಮಾರಂಭದ ದಿವ್ಯ ನೇತೃತ್ವವನ್ನು ಪೂಜ್ಯ ಶ್ರೀ ಶ್ರೀಗಳವರು

(52ನೇ ಪುಟ ನೋಡಿ)



[ಮುಂದುವರಿದ ಲೇಖನ]

# ಬಸವಣ್ಣನವರು-೮

## ಧರ್ಮಸಂಸ್ಥಾಪನೆ:-

—ಡಾ|| ಅ. ನ. ಕೃಷ್ಣರಾಯರು

ಜನತೆಯ ಆಧ್ಯಾತ್ಮಿಕ ಜೀವನದ ಮೇಲೆ ಬಂಡಿಗಟ್ಟಳೆ ಧೂಳು ಪರಂಪರಾಗತವಾಗಿ ತುಂಬಿ ಕುಳಿತಿತ್ತು. ಅವುಗಳನ್ನು ತೊಡೆಯುವ ಕೆಲಸವನ್ನು ಬಸವಣ್ಣನವರು ದಿಟ್ಟತನದಿಂದ ಕೈಗೊಂಡರು.

ದೇವರು ಎನ್ನುವ ಪರವಸ್ತುವೊಂದಿದೆ. ಅದು ಶಕ್ತಿ, ಸೌಂದರ್ಯ, ಸತ್ಯದ ಘನೀಭೂತ ಮೂರ್ತಿಯಾಗಿದೆ. ಮಾನವ ಆ ದೇವನ ಅಂಶ ಎನ್ನುವ ನಂಬಿಕೆ ಜನತೆಯಲ್ಲಿ ಹಲವು ಕಾರಣಗಳಿಂದ ಕ್ಷಯಿಸಿಹೋಗಿರುತ್ತದೆ. ದೇವರಿಲ್ಲ ಎಂಬ ನಾಸ್ತಿಕತನ ಒಂದೆಡೆ ತನ್ನ ಸಂದೇಶವನ್ನು ಬೀರಿದರೆ, ಸಹಸ್ರಾರು ದೇವತೆಗಳಿದ್ದಾರೆಂಬ ನಂಬಿಕೆ ಮತ್ತೊಂದೆಡೆ ಮನುಷ್ಯನ ಚೇತನವನ್ನು ಹರಿದು ಹಂಚಿಬಿಡುತ್ತದೆ. ದೇವರಿದ್ದಾನೆಂಬ ನಂಬಿಕೆಯೂ ಬೇಕು, ಅವನು ಒಬ್ಬನೆ ಎಂಬ ದೃಢವಿಶ್ವಾಸವೂ ಬೇಕು.

"ಸ್ವಾಮಿ ನೀನು, ಶಾಶ್ವತ ನೀನು
ಎತ್ತಿದೆ ಬಿರಿದ ಜಗವೆಲ್ಲವರಿಯಲು,
ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ.
ಪಶುಪತಿ ಜಗಕ್ಕೆ ಏಕೋದೇವ
ಸ್ವರ್ಗಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲಸಂಗಮದೇವಾ."
"ದೇವನೊಬ್ಬನೇ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ."
"ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೋ,
ನಂಬಬಲ್ಲ ಭಕ್ತಂಗೆ ದೇವನೊಬ್ಬ ಕಾಣಿರೊ,
ಬೇಡ ಬೇಡ, ಅನ್ಯದೈವದ ಸಂಗಬೇಡ, ಹೊಲ್ಲ,
ಬೇಡ ಬೇಡ, ಅನ್ಯದೇವವೆಂಬುದು ಹಾದರ ಕಾಣಿರೋ,
ಕೂಡಲಸಂಗಮದೇವರ ಕಂಡರೆ, ಮೂಗ ಕೊಯ್ವ ಕಾಣಿರೋ."
"ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ, ತಸವನು ಹಡೆಯಲು ಬಾರದು
ನೀರ ಕಡೆದರೆ ಕಡೆದಂತಲ್ಲದೆ, ಬೆಣ್ಣೆಯು ಹಡೆಯಲು ಬಾರದು
ಮೊಳಲ ಹೊಸೆದರೆ ಹೊಸೆದಂತಲ್ಲದೆ, ಸರವೆಯು ಹಡೆಯಲು ಬಾರದು

ನಮ್ಮ ಕೂಡಲಸಂಗಮದೇವನಲ್ಲದೆ ಅನ್ಯದೇವಕ್ಕೆರಗಿದರೆ ಹೊಳ್ಳ ಕುಟ್ಟಿ ಕೈ
ಹೊಟ್ಟಾದಂತಾಯಿತಯ್ಯ."

"ಹಲವು ಕೊಂಬೆಗೆ ಹಾಯಲು ಬೇಡ.
ಬರುಕಾಯಕ್ಕೆ ಸೀಡಲು ಬೇಡ,
ಲೋಗರಿಗೆ ಕೊಟ್ಟು ಭ್ರಮಿತನಾಗಬೇಡ,
ಆಚಾರವೆಂಬುದು ಹಾವಸೆಗಲ್ಲು,
ಭಾವ ತಪ್ಪಿದ ಬಳಿಕ ಏಗೈದಡಾಗದು,
ಅಂಜದಿರು, ಅಳುಕದಿರು, ಪರದೈವಕ್ಕೆರಗದಿರು
ಕೂಡಲಸಂಗಯ್ಯನ ಕೈಯ್ಯಲು ಈಸುವುದೆನ್ನ ಭಾರ."

ದೇವನೊಬ್ಬನೆಂಬ ನಂಬಿಕೆಯನ್ನಿಟ್ಟುಕೊಂಡು ಕೂಡಲಸಂಗಯ್ಯನ ನೀನು ನೆನೆದೆಯಾದರೆ ಅವನ ಕಾರುಣ್ಯವನ್ನು ದೊರಕಿಸುವ ಭಾರ ನನಗಿರಲಿ ಎಂದು ಬಹಳ ದೊಡ್ಡ ಕರ್ತವ್ಯವನ್ನು ಬಸವಣ್ಣನವರು ತಮ್ಮ ಮೇಲೆ ಹಾಕಿಕೊಳ್ಳುತ್ತಾರೆ.

ಇಷ್ಟು ಒತ್ತಿಯೊತ್ತಿ ದೇವನೊಬ್ಬನೆ ಎಂದು ಹೇಳುವ ಅಗತ್ಯ ಅಳತೆ ಮೀರಿದ್ದಿದೆ. ವಿಶ್ವದೇವತಾ ಕಲ್ಪನೆಯನ್ನು ಮಹೋಪನಿಷತ್ತುಗಳು ಮಂಡಿಸಿದ ಮೇಲೆ, ಕಾಲಕ್ರಮದಂತೆ ರುದ್ರಾದಿ ದೇವತೆಗಳೂ ಇತರ ಉಪನಿಷತ್ಕಾರರ ಕೈವಾಡದಿಂದ ಪ್ರಸಾರಕ್ಕೆ ಬಂದವು. ಪುರಾಣ, ಇತಿಹಾಸಗಳ ಕಾಲಕ್ಕೆ ವೇದಗಳು ಕೆಲವು ದೇವತೆಗಳು ಹಲವು ದೇವತೆಗಳಾದವು. ಉಪನಿಷತ್ತಿನ ಸಂಕೇತ, ರಕ್ತ ಮಾಂಸ ಹೊತ್ತು ಸಾಮಾನ್ಯ ಮಾನವರೊಂದಿಗೆ ಪ್ರತಿಸ್ಪರ್ಧಿಸುತ್ತ ನಿಂತಿತು. ಕ್ಷುದ್ರದೇವತೆಗಳ ಬಡಿವಾರದಲ್ಲಿ ಮೂಲ ದೇವರು ಮುಖ ಮರೆಸಿಕೊಳ್ಳುವ ಹೊತ್ತು ಬಂತು. ಜೀವನದ ಪ್ರತಿಯೊಂದು ಅಂಗವನ್ನು ಕ್ಷುದ್ರದೇವತೆಗಳು ಮುತ್ತಿ ಮಾನವನನ್ನು ಅಸ್ವತಂತ್ರನನ್ನಾಗಿ ಮಾಡಿ ಮೌಢ್ಯದಶರಪಂಜರದಲ್ಲಿ ಕೆಡವಿದವು. ಅಂತಹ ದೇವತೆಗಳನ್ನು ಕಂಡರೆ ಬಸವಣ್ಣನವರಿಗೆ ಸಹಿಸಲಾಗದಷ್ಟು ಮುನಿಸು. ಅವುಗಳನ್ನು ಬಸವಣ್ಣನವರು ತೀವ್ರವಾಗಿ ಖಂಡಿಸುತ್ತಾರೆ. ಬ್ರಹ್ಮ, ವಿಷ್ಣು, ಮಹೇಶ್ವರರು ಆ ಅಸಂಖ್ಯಾತ ದೇವರುಗಳ ಪೀಳಿಗೆಯವರೇ.

ಉಮಾಧಿನಾಥರು ಕೋಟಿ,
ಪಂಚವಕ್ತ್ರರು ಕೋಟಿ,
ನಂದಿವಾಹನರೊಂದು ಕೋಟಿ ನೋಡಯ್ಯ
ಸದಾಶಿವರೊಂದು ಕೋಟಿ ಗಂಗೆ ವಾಲುಕ ಸಮರುದ್ರರು
ಇವರೆಲ್ಲರೂ ಕೂಡಲಸಂಗನ ಸಾನಿಧ್ಯರಲ್ಲದೆ ಸಮರಸವೇದ್ಯರೊಬ್ಬರೂ ಇಲ್ಲ."



"ಆರುಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೆ ಒಂದು ದಿನವಾಯಿತ್ತು
ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತು
ರುದ್ರಾವತಾರ ಹಲವಲ್ಲಿ ನಮ್ಮ ಕೂಡಲಸಂಗಮದೇವನೇನೆಂದು ಅರಿಯ."

ಬ್ರಹ್ಮ ವಿಷ್ಣು, ಮಹೇಶ್ವರರೇ ಒಬ್ಬ ಮಹಾದೇವನ ಆಜ್ಞಾನುವರ್ತಿಗಳು. ಅವರನ್ನು ನಂಬಿದರೆ ಪರಮಪದ ದೊರೆಯುವುದೇ ? ಅವರೇ ನಾನು ಹಿರಿಯ, ನೀನು ಕಿರಿಯ ಎಂದು ಬಡಿದಾಡುತ್ತಾರೆ. ಅವರನ್ನು ನಂಬುವವನು ಮಣ್ಣು ತೆಪ್ಪವನ್ನು ನೆಚ್ಚಿ ಹೊಳೆಯಲ್ಲಿ ಇಳಿದಂತಾಗುತ್ತದೆ.

"ಋಣ ತಪ್ಪಿದ ಹೆಂಡತಿಯಲ್ಲಿ, ಗುಣ ತಪ್ಪಿದ ನಂಟನಲ್ಲಿ,
ಜೀವವಿಲ್ಲದ ದೇಹದಲ್ಲಿ ಫಲವೇನೋ ?
ಆಳ್ದನೊಲ್ಲದಾಳಿನಲ್ಲಿ, ಸಿರಿ ತೊಲಗಿದರಸಿನಲ್ಲಿ, ವರವಿಲ್ಲದ ದೈವದಲ್ಲಿ ಫಲವೇನೋ?
ಕೊಳೆತ ಹೂವಿನಲ್ಲಿ ಕಂಪ, ಕುಪ್ಪಸನುಳಿದ ಸೂಳೆಯಲ್ಲಿ ಪೆಂಪ,
ಕೊಳಚಿ ನೀರಿನಲ್ಲಿ ಗುಂಪನರಸುವರಿ ಮರುಳೇ
ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ ಪರಮ ಕಾರುಣಿಕ ನಮ್ಮ
ಕೂಡಲಸಂಗಮದೇವಾ.''

ಕ್ಷುದ್ರ ದೇವತೆಗಳೇ ಪರಾಶ್ರಯಜೀವಿಗಳು. ಹಲವರನ್ನು ಕಾಡಿ ಬೇಡಿ ಹೊಟ್ಟೆ ತುಂಬಿಕೊಳ್ಳುತ್ತವೆ.

"ಆವಾಗಲೂ ಲೋಗರ ಮನೆಯ ಬಾಗಿಲ ಕಾಯ್ದು ಕೊಂಡಿಪ್ಪವು ಕೆಲವು ದೈವಂಗಳು
ಹೋಗೆಂದರೆ ಹೋಗವು.
ನಾಯಿಂದ ಕರಕಷ್ಟ, ಕೆಲವು ದೈವಂಗಳು.
ಲೋಗರ ಬೇಡಿ ಕೊಂಡುಂಬ ದೈವಂಗಳು ತಾನೇನ ಕೊಡುವವೋ
ಕೂಡಲಸಂಗಮದೇವಾ.''

ಸೌಮ್ಯ ದೇವತೆಗಳ ಉಪಾದಿ ಸಾಲದೆಂದು ಉಗ್ರ ದೇವತೆಗಳ ಕಾಟ ಬೇರೆ.

"ಹಾಳು ಮೊರಡಿಗಳಲ್ಲಿ, ಊರ ದಾರಿಯಲ್ಲಿ, ಕೆರೆ ಭಾವಿ ಹೂಗಿಡ
ಮರಂಗಳಲ್ಲಿ
ಗ್ರಾಮ ಮಧ್ಯದಲ್ಲಿ ಚೌಪಥ ಪಟ್ಟಣ ಪ್ರವೇಶದಲ್ಲಿ, ಹಿರಿಯಾಲದ ಮರದಲ್ಲಿ
ಮನೆಯ ಮಾಡಿ ಕರೆವೆಮ್ಮೆಯ ಹಸುಗೂಸು, ಬಸಿರೆ, ಬಾಣತಿ,
ಕುಮಾರಿ ಕೊಡಗೂಸೆಂಬರ.

ಹಿರಿದುಂಬ ತಿರಿದುಂಬ ಮಾರಯ್ಯ, ಬೀರಯ್ಯ, ಕೇಚರ, ಗಾವಿಲಿ,
ಅಂತರ, ಬೆಂತರ, ಕಾಳಯ್ಯ ಮಾಳಯ್ಯ, ಕೇತಯ್ಯ, ಧೂಳಯ್ಯಗಳೆಂಬ
ನೂರು ಮಡಿಕೆಗೆ

ನಮ್ಮ ಕೂಡಲಸಂಗಮದೇವರ ಶರಣೆಂಬುದೊಂದು ದೊಣ್ಣೆ ಸಾಲದೇ?''
"ಅರಗು ತಿಂದು ಕರಗುವ ದೈವವ
ಉರಿಯು ಕಂಡರೆ ಮುರುಟುವ ದೈವವನೆಂತು ಸರಿ ಎಂಬೆನಯ್ಯ?
ಅಂಜಿಕೆ ಬಂದರೆ ಹೂಳುವ ದೈವವನೆಂತು ಸರಿ ಎಂಬೆನಯ್ಯ?
ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ."
"ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ,
ಹಣಿಗೆ ದೈವ, ಬಿಲ್ಲುನಾರಿ ದೈವ, ಕಾಣಿರೋ
ಕೊಳಗ ದೈವ, ಗಿಣಿಲು ದೈವ ಕಾಣಿರೋ
ದೈವ ದೈವವೆಂದು ಕಾಲಿಡಲಿಂಬಿಲ್ಲ
ದೇವನೊಬ್ಬನೆ ಕೂಡಲಸಂಗಮ ದೇವಾ.''

ಕ್ರೂರ ದೇವತೆಗಳನ್ನು ನಂಬಿ ಯಾವಜ್ಜೀವವೂ ಭಯದಿಂದ ತೊಳಲುವವರಿಗೆ ಬಸವಣ್ಣನವರು ಧೈರ್ಯವನ್ನು ನೀಡುತ್ತಾರೆ.

"ಮಾರಿ ಮಸಣಿ ಎಂಬವು ಬೇರಿಲ್ಲ ಕಾಣಿರೊ
ಮಾರಿ ಎಂಬುದೇನು?
ಕಂಗಳು ತಪ್ಪಿ ನೋಡಿದರೆ ಮಾರಿ,
ನಾಲಿಗೆ ತಪ್ಪಿ ನುಡಿದರೆ ಮಾರಿ,
ನಮ್ಮ ಕೂಡಲಸಂಗಯ್ಯನ ನೆನಹು ಮರೆದರೆ ಮಾರಿ.„

ಯಜ್ಞ ಯಾಗಾದಿಗಳ ನೆಪದಿಂದ ಪ್ರಾಣಿವಧೆ ಮಾಡುವವರನ್ನು ಕಂಡರೆ ಬಸವಣ್ಣನವರಿಗೆ ಕೋಪ ಕೆರಳುತ್ತದೆ. ನಿರಪರಾಧಿಗಳಾದ ಮೂಕಜೀವಿಗಳನ್ನು ಕಾಣದ ಸುಳ್ಳು ದೈವವನ್ನು ಮೆಚ್ಚಿಸುವುದಕ್ಕೆ ಬಲಿ ಕೊಡುವುದು ಮಹಾಪಾಪವೆಂದು ಅವರ ವಾದ. ವಧಾಸ್ತಂಭಕ್ಕೆ ಬಿಗಿಯಲ್ಪಟ್ಟಿರುವ ಮೂಕ ಜೀವಿಗಳನ್ನು ನೋಡುತ್ತ ನೋಡುತ್ತ ಅಣ್ಣನವರ ಕರುಣೆ ಕಣ್ಣೀರಾಗಿ ಹರಿಯುತ್ತದೆ. ಶಾಸ್ತ್ರಾಧಾರವಿದೆ, ನಿಜ ಯಾವುದಕ್ಕೆ ಶಾಸ್ತ್ರಾಧಾರವಿಲ್ಲ. ಹೋತಿಂಗೆ ಮಾರಿಯಾದ ಶಾಸ್ತ್ರದ ಮಾತು ಹೊಲ್ಲ. ಜೀವ ಹಿಂಸೆಮಾಡುವ ವಿಪ್ರನ ವೃತ್ತಿ ಹೊಲೆಯ ವೃತ್ತಿ."

''ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೇ ಅಳು ಕಂಡ್ಯಾ,
ವೇದವನೋದಿದವರ ಮುಂದೆ ಅಳು ಕಂಡ್ಯಾ,
ಶಾಸ್ತ್ರವನೋದಿದವರ ಮುಂದೆ ಅಳು ಕಂಡ್ಯಾ,
ನೀನತ್ತುದಕ್ಕೆ ತಕ್ಕುದು ಮಾಡುವ ಕೂಡಲಸಂಗಮದೇವಾ."

ಸರ್ವಜೀವರುಗಳ ತಂದೆಯಾದ ಸಂಗನಿಗೆ ಈ ಜೀವಹಿಂಸೆ ಪ್ರಿಯವೇ? ಪ್ರಾಣಿ ವಧೆಯನ್ನು ಓಸರಿಸುವ ವೇದ ಅವನ ವಾಣಿಯೇ? ಅಣುರೇಣು ತೃಣ ಕಾಷ್ಠಗಳಲ್ಲಿ ಹುದುಗಿರುವ ಪರಮಾತ್ಮ ಯಜ್ಞ ಪಶುಗಳ ಹೊರಗಿಹನೇ? ಹರನ ಕಾರುಣ್ಯವನ್ನು



ದೊರಕಿಸುವುದಕ್ಕೆ ಕುರಿಯ ಮಧ್ಯಸ್ಥಿಕೆ ಬೇಕೆ? ಹರಮುಳಿದವರ ಕುರಿ ಸತ್ತು ಕಾಯ್ವುದೇ? ಶಾಸ್ತ್ರದ ನಿಷ್ಕರುಣ ಶಾಸನ ಹಿರಿದೋ ಹೃದಯದ ಕಾರುಣ್ಯವಾಣಿ ಹಿರಿದೋ ಎಂಬ ಮಹತ್ವದ ಪ್ರಶ್ನೆಗಳನ್ನು ಬಸವಣ್ಣನವರೆತ್ತುತ್ತಾರೆ. ನಮ್ಮದೆಂದು ವೇದಪುರಾಣಗಳನ್ನು ಮನ್ನಿಸಬೇಕೇನು? ನಮ್ಮ ಹಿತ್ತಲಿನಲ್ಲಿ ಬೆಳದದ್ದೆಂದು ಕಳ್ಳಿಯ ಹಾಲನ್ನೇಕೆ ಕುಡಿಯಬಾರದು?

ಹಿಂಸಾತ್ಮಕವಾದ ಕೆಲವು ಆಚರಣೆಗಳ ಪ್ರತೀಕವಾಗಿ ವೇದ ಪುರಾಣಗಳಲ್ಲಿ ಪಾಪ, ಪುಣ್ಯ, ಸ್ವರ್ಗ ನರಕ ಕಲ್ಪನೆಗಳು ಬೆಳೆಯುತ್ತ ಬಂದವು. ಒಂದು ಸಟೆಯನ್ನು ಸಾಧಿಸಹೋಗಿ ಪುರಾಣಕಾರರು ಭಾರತೀಯ ಜೀವನವನ್ನೆಲ್ಲಾ ಸಟೆಯ ಸಾಮ್ರಾಜ್ಯ ವನ್ನಾಗಿ ಮಾಡಿಬಿಟ್ಟಿದ್ದಾರೆ. ರಾಜಶಾಸನ, ಮಠಶಾಸನ, ರೂಢಿಶಾಸನಗಳು ಇವು ಗಳನ್ನು ಪೋಷಿಸಿಕೊಂಡು ಬಂದು ಸಮಾಜವನ್ನು ಕತ್ತಲೆಯಿಂದ ಕಗ್ಗತ್ತಲೆಗೆ ಒಯ್ದಿವೆ. ಬಸವಣ್ಣನವರಂತಹ ವಿಚಾರವಾದಿಗಳು ಅವುಗಳನ್ನು ಪ್ರತಿಭಟಿಸಿ ಅವುಗಳ ಕಾಠಿಣ್ಯತೆ ಯನ್ನು ಕರಗಿಸುತ್ತಾ ಬಂದಿದ್ದಾರೆ. ಇಂದು ಸಜೀವ ಪ್ರಾಣಿಹತ್ಯೆಯ ಬದಲು ಪಿಷ್ಟ ಪ್ರಾಣಿಯಿಂದ ವೇದಾಭಿಮಾನಿ ದೇವತೆಗಳು ತೃಪ್ತರಾಗುತಾರೆ. ಪಿಷ್ಟವೇ ಆಗಲಿ, ಸಜೀವ ಪ್ರಾಣಿಯೇ ಆಗಲಿ ವಧೆಗೊಳ್ಳಬೇಕಾದ ಅಗತ್ಯವೇನು ಎಂದು ಮೂಲಸ್ತಂಭ ವನ್ನೇ ಹಿಡಿದು ಬಸವಣ್ಣನವರು ಜಗ್ಗಿಸಿದ್ದಾರೆ. ಅವರು ಖಂಡಿಸುತ್ತಿರುವುದು ಯಜ್ಞ ಯಾಗಾದಿಗಳ ಹಿಂದಿರುವ ಜೀವಹಿಂಸೆಯ ಮನೋಭಾವವನ್ನು.

ಹಿಂದೂ ಸಮಾಜವನ್ನು ಆಲ್ಲೋಲ ಕಲ್ಲೋಲ ಮಾಡಿರುವ ಮತ್ತೊಂದು ಸನಾತನ ತತ್ವವೆಂದರೆ ಪುಣ್ಯ–ಪಾಪ, ಸ್ವರ್ಗ ನರಕಗಳ ಕಲ್ಪನೆ ರೂಢಿಗೆ ವಿರುದ್ಧವಾಗಿ ಏನನಾಡಿದರೂ ಪಾಪ, ಹಾಗೆ ಆಚರಿಸುವವನು ಹೋಗುವುದು ನರಕಕ್ಕೆ. ಪಾಪ–ಪುಣ್ಯ, ನಾಕ-ನರಕಗಳ ನಿಜವಾದ ಅರ್ಥವನ್ನು ಬಸವಣ್ಣನವರು ತಿಳಿಯಾದ ಮಾತು ಗಳಲ್ಲಿ ವಿವರಿಸಿದ್ದಾರೆ.

''ಪುಣ್ಯಪಾಪಂಗಳೆಂಬುದು ತಮ್ಮ ಇಷ್ಟವು ಕಂಡಿರೇ,
ಅಯ್ಯಾ ಎಂದಡೆ ಸ್ವರ್ಗ ಎಲವೋ ಎಂದರೆ ನರಕ,
ದೇವಾ ಭಕ್ತಜಯಜೀಯಾ ಎಂಬ ನುಡಿಯೊಳಗೆ ಕೈಲಾಸವೇ ಇದೆ
ಕೂಡಲಸಂಗಮದೇವಾ."
"ನೀನೊಲಿಯಿತ್ತೆ ಪುಣ್ಯ, ನೀ ಒಲ್ಲದದು ಪಾಪ, ಕಂಡಯ್ಯ,
ಸಕಲ ಜಗದೊಳಗೆ ಅನುಶೃತನಾಗಿಪ್ಪೆಯಯ್ಯಾ
ನೀನೊಲಿದವನೇ ನಿಮ್ಮನರಿವನು,
ನೀನೊಲಿದವನೇ ಧನ್ಯ ಜಗಕ್ಕೆ ಪಾವನ, ಕೂಡಲಸಂಗಮದೇವಾ''
"ಸುಖ ಬಂದಡೆ ಪುಣ್ಯದ ಫಲವೆನ್ನದು.

ದುಃಖ ಬಂದಡೆ ಪಾಪದ ಫಲವೆನ್ನೆನು,
ಕರ್ಮಕ್ಕೆ ಕರ್ತೃವೇ ಕಂಡೆ ಎಂದನ್ನೆನು,
ಉದಾಸೀನವಿಡಿದು ಶರಣೆನ್ನೆನು,
ಕೂಡಲಸಂಗಮದೇವಾ, ನೀಮಾಡಿದುಪದೇಶವೆನಗೆ
ಈ ಪರಿಯಲಿ ಸಂಸಾರದ ಸವಿಯ ಬಳಸುವೆನು."

ಸುಖ ಬಂದರೆ ಪುಣ್ಯವೆಂದು ಹಿಗ್ಗದೆ, ದುಃಖವೊದಗಿದರೆ ಪಾಪವೆಂದು ತಗ್ಗದೆ ಸಾಧಕನು ಸಮಚಿತ್ತನಾಗಿರಬೇಕು.

ನಾಕನರಕಗಳು ನಮ್ಮನುಳಿದು ಬೇರೆಯಿಲ್ಲ.

''ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ,
ಸತ್ಯವ ನುಡಿವುದೇ ದೇವ ಲೋಕ
ಮಿಥ್ಯವ ನುಡಿವುದೇ ಮರ್ತ್ಯಲೋಕ,
ಆಚಾರವೇ ಸ್ವರ್ಗ ಅನಾಚಾರವೇ ನರಕ.
ಕೂಡಲಸಂಗಮದೇವಾ, ನೀವೇ ಪ್ರಮಾಣ.''
''ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೇ?
ಈ ಲೋಕದೊಳಗೇ ಮತ್ತನಂತಲೋಕ, ಶಿವಲೋಕ ಶಿವಚಾರವಯ್ಯಾ
ಶಿವಭಕ್ತನಿದ್ದ ತಾವೆ ದೇವಲೋಕ, ಭಕ್ತನಂಗಣವೇ ವಾರಣಾಸಿ.
ಕಾಯವೇ ಕೈಲಾಸ, ಇದು ಸತ್ಯ ಶಿವನಾಣೆ ಕೂಡಲಸಂಗಮದೇವಾ."

ನಮ್ಮ ನಡೆನುಡಿಯಿಂದ. ಆಚಾರ ವ್ಯವಹಾರದಿಂದ ಇಹಲೋಕವನ್ನೇ ನಾಕವನ್ನಾಗಿಯೂ ಮಾಡಬಹುದು, ನರಕವನ್ನಾಗಿಯೂ ಮಾಡಬಹುದು, ಸತ್ಯ ಮಿಥ್ಯೆಗಳ ಸೂಕ್ಷ್ಮ ವ್ಯತ್ಯಾಸವನ್ನರಿತರೆ ಈ ತತ್ವ ಮನವರಿಕೆಯಾಗುವುದೆಂದು ಬಸವಣ್ಣನವರ ಮತ.

ಪಾಪ-ಪುಣ್ಯ ಕಲ್ಪನೆಗಳೇ ಇಂತು ವಿಚಾರಕ್ರಾಂತಿಗೊಳಗಾದ ಮೇಲೆ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡು ಆತ್ಮವಂಚನೆ ಮಾಡಿಕೊಳ್ಳುವುದೂ, ಪುಣ್ಯಗಳಿಸಲಿಕ್ಕೆಂದು ತೀರ್ಥಕ್ಷೇತ್ರಗಳಿಗೆ ಹೋಗುವುದೂ ಭ್ರಾಂತಿಯಾಗುತ್ತದೆ.

"ಎಲವೋ, ಎಲವೋ ಪಾಪಕರ್ಮವ ಮಾಡಿದವನೇ,
ಎಲವೋ, ಎಲವೋ ಬ್ರಹ್ಮಹತ್ಯವ ಮಾಡಿದವನೇ,
ಎಲವೋ, ಶರಣೆನ್ನೆಲವೋ,
ಒಮ್ಮೆ ಶರಣೆಂದಡೆ ಪಾಪಕರ್ಮ ಕೆಟ್ಟೋಡುವವು,
ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನಪರ್ವತಂಗಳೈದವು,
ಓರ್ವಂಗೆ ಶರಣೆನ್ನಿ ನಮ್ಮ ಕೂಡಲಸಂಗಮದೇವಂಗೆ."
"ಸದಾಚಾರ ಸದ್ಭಕ್ತಿ ಇಲ್ಲದವರನೊಲ್ಲನಯ್ಯ,



ಅವರಾರಾಧನೆ ದಂಡ.
ನಿಚ್ಚನಿಚ್ಚ ಪ್ರಾಯಶ್ಚಿತ್ತರನೊಲ್ಲ, ಕೂಡಲಸಂಗಮದೇವ, ಭೂಭಾರಕರ.''

ಯಾವ ನೀಚಕೃತ್ಯವನ್ನು ಮಾಡಿದರೂ, ಪಾಪಾಚರಣೆಗಳಿಗೆ ಮನಸ್ಸನ್ನು ಮೀಸಲು ಮಾಡಿದರೂ ಒಮ್ಮೆ ಕಾಶಿ, ಕೇದಾರ, ರಾಮೇಶ್ವರಗಳಿಗೆ ಯಾತ್ರೆ ಮಾಡಿ ಗಂಗೆ ಗೋದಾವರಿಗಳಲ್ಲಿ ಮುಳುಗಿ ಬಂದರೆ ಪಾಪ ನಿರ್ಲೇಪವಾಗುತ್ತದೆಂಬುದು ರೂಢಿಯ ಕಲ್ಪನೆ. ಸರ್ವಾಂತರ್ಯಾಮಿಯಾದ ಪರಮಾತ್ಮ ಕಾಶಿ, ಕೇದಾರಗಳಲಿದ್ದಾನೆಂದು ಜನ ಅವನನ್ನು ಹುಡುಕಿಕೊಂಡು ಅಲ್ಲಿಗೆ ಹೋಗುತ್ತಾರೆ.

"ಅಡಿಗಡಿಗೆ ಸ್ಥಾನನಿಧಿ,
ಅಡಿಗಡಿಗೆ ದಿವ್ಯಕ್ಷೇತ್ರ,
ಅಡಿಗಡಿಗೆ ನಿಧಿಯು ನಿಧಾನನೋಡಾ,
ಆತನ ಇರವೇ ಅವಿಮುಕ್ತಕ್ಷೇತ್ರ, ಕೂಡಲಸಂಗನ ಶರಣ ಸ್ವತಂತ್ರನಾಗಿ.''

ಮಾಡಿದ ಪಾಪ ಗಂಗಾಸ್ನಾನದಿಂದ ತುಂಗಪಾನದಿಂದ ತೊಡೆದು ಹೋಗುವುದೇ?

"ನೀರಕಂಡಲ್ಲಿ ಮುಳುಗುವರಯ್ಯ !
ಮರವ ಕಂಡಲ್ಲಿ ಸುತ್ತುವರಯ್ಯ !
ಬತ್ತುವ ಜಲವ ಒಣಗುವ ಮರವ ಮೆಚ್ಚಿದವರು ನಿಮ್ಮನೆತ್ತ ಬಲ್ಲರು
ಕೂಡಲಸಂಗಮದೇವಾ.''
"ಮಿಂಬುಲಿಗನ ಹಕ್ಕಿಯಂತೆ ನೀರ ತಡಿಯಲಿದ್ದು, ಮೂಗಹಿಡಿದು
ಧ್ಯಾನವ ಮಾಡುವರಯ್ಯ
ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುತ ಕಣ್ಣ ಮುಚ್ಚಿ
ಬೆರಳನೆಣಿಸುವರಯ್ಯ
ನಿಮ್ಮ ಕೈಯಲ್ಲಿ ಕಟ್ಟಿದ ದರ್ಭೆಯ ಹುಲ್ಲು ಕೂಡಲಸಂಗಮನನರಿಯದೆ
ಮೊರೆ ಇಡುವಂತೆ,''

ಒಮ್ಮೆ ಗಂಗೆಯಲ್ಲಿ ಮುಳುಗುವವರಿಗೆ ಅಪಾರ ಪುಣ್ಯ ದೊರೆಯುವುದಾದರೆ ಸದಾ ಗಂಗೆಯಲ್ಲಿಯೇ ಇರುವ ಮತ್ಸ್ಯ ಕೂರ್ಮ' ಮಂಡೂಕಗಳೆಷ್ಟು ಪುಣ್ಯಭಾಗಿಗಳಾಗಿರಬೇಕು. ಆದ್ದರಿಂದ 'ಸತ್ಯ ಶೌಚವ ನಿತ್ಯ ನೇಮವ ತಪ್ಪದೆ ಮಾಡಬಲ್ಲರೆ, ಅದು ಲೇಸು' ಎಂದು ಬಸವಣ್ಣನವರ ಅಭಿಪ್ರಾಯ.

ನೇಮ ನಿಷ್ಠೆಗಳು ಒಂದು ಕಾಲದಲ್ಲಿ ಸಾಧಕನಲ್ಲಿ ಸಂಯಮವನ್ನು ಸ್ಥಾಪಿಸುವುದಕ್ಕೆ ನಿಯೋಜಿಸಲ್ಪಟ್ಟವು. ತನಗೆ ಅತ್ಯಂತ ಪ್ರಿಯವಾದ ವಸ್ತುವನ್ನು ಬಿಡುವ ಮನಃಸ್ಥೈರ್ಯವೇ ನೇಮವೆನಿಸುತ್ತಿತ್ತು. ಅದು ಬರಬರುತ್ತ ವಿಪರೀತ ಕಲ್ಪನೆಗೆಡೆ

ಕೊಟ್ಟು ತನಗೆ ಬೇಡದ ವಸ್ತುವನ್ನು ದೇವರ ಹೆಸರಿನಲ್ಲಿ ಮಾನವ ಬಿಡುತ್ತ ಬಂದ.

"ಹಾಲನೇಮ, ಹಾಲಕೆನೆಯನೇಮ. ಕೆನೆಯು ತಪ್ಪಿದ ಬಳಿಕ
ಕಿಚ್ಚಿಡಿಯ ನೇಮ
ಬೆಣ್ಣೆಯನೇಮ, ಬೆಲ್ಲದನೇಮ, ಅಂಬಲಿಯ ನೇಮದವರಾರನ್ನೂ ಕಾಣೆ."
"ಬಂದುದ ಕೈ ಕೊಳ್ಳಬಲ್ಲರೆ ನೇಮ,
ಇದ್ದುದ ವಂಚನೆಯ ಮಾಡದಿದ್ದರೆ ಅದು ನೇಮ.
ನಡದು ತಪ್ಪಿದಿದ್ದರೆ ಅದು ನೇಮ,
ನುಡಿದು ಹುಸಿಯದಿದ್ದರೆ ಅದು ನೇಮ.
ನಮ್ಮ ಕೂಡಲಸಂಗನ ಶರಣರು ಬಂದರೆ ಒಡೆಯರಿಗೊಡವೆಯ
ನರ್ಪಿಸುವುದೇ ನೇಮ."

ಎಳಚಿಕಾಯ ನೇಮ, ಹಾಗಲಕಾಯಿ ಬೇವಿನಕಾಯಿಗಳ ನೇಮವನ್ನು ಬಿಟ್ಟರೂ ಚಿಂತೆಯಿಲ್ಲ, ಗುರು ಕರುಣದ ಒಡನೆ ಪುಟ್ಟಿದ ನೇಮವನ್ನು ಬಿಡಬೇಡ. ಸದಾಚಾರ ಸದ್ವರ್ತನೆಗಳನ್ನು ಪಾಲಿಸಬೇಕೆಂಬ ನೇಮವನ್ನು ತೊರೆಯಬೇಡ.

ಬಸವಣ್ಣನವರು ತಮ್ಮ ಸಂದೇಶವನ್ನು ಕ್ರೋಢೀಕರಿಸಿ ಒಂದು ವಚನದಲ್ಲಿ ನುಡಿದಿದ್ದಾರೆ.

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,
ತನ್ನ ಬಣ್ಣಿಸಬೇಡ, ಇದರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ."
"ಹೊರಗೆ ಪೂಸಿ ಏವೆನಯ್ಯಾ, ಒಳಗೆ ಶುದ್ಧವಿಲ್ಲದನ್ನಕ್ಕ
ಮಣಿಯ ಕಟ್ಟಿ ಏವೆನಯ್ಯಾ, ಮನಮುಟ್ಟುದನ್ನಕ್ಕ,
ನೂರನೋದಿ ಏವೆನಯ್ಯಾ, ನಮ್ಮ ಕೂಡಲಸಂಗಮದೇವರ ಮನ
ಮುಟ್ಟದನಕ್ಕ."

ಬುದ್ಧ, ಕ್ರಿಸ್ತರ ನುಡಿಯೂ ಇದೇ. ಎಲ್ಲ ಧರ್ಮಗಳ ಸಾರವೂ ಇದೇ ಆಗಿದೆ. ಪೂಜೆ ಪುರಸ್ಕಾರ, ವ್ರತ, ನೇಮ, ನಿಷ್ಠೆ. ತೀರ್ಥಯಾತ್ರೆ, ಸ್ನಾನಾದಿಗಳೆಲ್ಲ ಹೊರಗಿನ ಆಚಾರಗಳು, ಡಂಭಾಚಾರಗಳು.

(ಮುಂದುವರಿಯುತ್ತದೆ)



# ವೀರಶೈವ ಪುಣ್ಯ ಪುರುಷರು

## ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು

— ಕೆ. ಬಸವರಾಜು

ಮೃಗದಲ್ಲಿ ಕಸ್ತೂರಿ, ಪಾಷಾಣ ಖಂಡದಲ್ಲಿ ರತ್ನ, ಮೌಕ್ತಿಕದಲ್ಲಿ ಮುತ್ತು ಉದಯವಾಗುವಂತೆ ಜಗತ್ತಿನಲ್ಲಿ ಸುಪ್ರಸಿದ್ಧ ಪುಣ್ಯ ಪುರುಷರ ಅವತಾರಗಳು ಬಹುಶಃ ಪೇಟೆಯ ಬೂಟಾಟಿಕೆಯಿಲ್ಲದ, ಇಂಬಿನ ಮೋಜಿಲ್ಲದ, ಗಟ್ಟಿಗೊಂಡ ಮೈಕಟ್ಟುಳ್ಳವರೂ, ಸತ್ಯ ಸಂಧರೂ, ದುಡಿದುಣ್ಣುವವರೂ ವಾಸಿಸುವ ಹಳ್ಳಿಗಳ ಬಡ ಕುಟುಂಬಗಳಲ್ಲಿ ಆಗುತ್ತವೆನ್ನುವುದು ಸಹಜವಾದ ಮಾತು.

ಜನನ: "ಜೋಯಿಸರ ಹರಳ್ಳಿ" ಎಂಬುದು ಧಾರವಾಡ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕಿನಲ್ಲಿ ಒಂದು ಸಣ್ಣ ಹಳ್ಳಿ. ಸುಮಾರು ನೂರೈವತ್ತು ವರ್ಷಗಳ ಹಿಂದೆ ಅಲ್ಲಿ ಸಾಲೀ ಮಠದ ಗುರುಸ್ಥಾನಕ್ಕೆ ಸೇರಿದ 'ಕೊಟ್ಟೂರಪ್ಪಯ್ಯ' ಎಂಬ ಸಾಧು ಗೃಹಸ್ಥ ಗಣಂಗಳಿದ್ದರು. ಅವರಿಗೆ ಆಚಾರ ಶೀಲರಾದ 'ಬಸವಪ್ಪಯ್ಯ' ಎಂಬೋರ್ವ ಸುಪುತ್ರ. ಆ ಬಸವಪ್ಪಯ್ಯನವರ ಪತ್ನಿ ಸದ್ಭಕ್ತಿ ಸದಾಚಾರ ಸಂಪನ್ನೆಯಾದ ನೀಲಮ್ಮ ಎಂಬುವರು. ಆ "ಸಂತ ಜನನಿ" ಯ ತವರು ಅದೇ ತಾಲ್ಲೂಕಿನ ಲಿಂಗದಹಳ್ಳಿ. ಆ ಮಹಾತಾಯಿಯ ಗರ್ಭಾಂಬುಧಿಯಲ್ಲಿ ಶಾಲಿವಾಹನ ಶಕೆ ೧೭೮೮ ನೆಯ ಪ್ರಭವ ಸಂವತ್ಸರದಲ್ಲಿ ಅಘಟಿತ ಘಟಿತ ಮಹಿಮೆಯುಳ್ಳ ಪುತ್ರ ರತ್ನವೊಂದು ಜನಿಸಿತು. ಅದಕ್ಕೆ 'ಸದಾಶಿವ'ನೆಂದು ನಾಮಕರಣ ಮಾಡಲಾಯಿತು.

ಬಾಲ್ಯ – ವಿದ್ಯಾಭ್ಯಾಸ: ಅವರು ಜನಿಸಿದ ಕುಟುಂಬ ಬಹಳ ಬಡತನವುಳ್ಳದ್ದಾಗಿತ್ತು. ಮನೆ ತುಂಬ ಮಂದಿ. ಪ್ರತಿನಿತ್ಯ ಇಬ್ಬರು ಮೂವರು ಭಿಕ್ಷೆ ಮಾಡಿಕೊಂಡು ಬರದೇ ಚರಿತಾರ್ಥವೇ ಸಾಗುವಂತಿಲ್ಲ. ಹೀಗಿರುವಾಗ ತಂದೆ ಬಸವಪ್ಪನವರೂ ಶಿವಾಧೀನರಾದರು. ಇದರಿಂದ ಕುಟುಂಬಕ್ಕೆ ಮತ್ತಷ್ಟು ಆಘಾತವುಂಟಾಯಿತು. ಕೊನೆಗೆ ಅಜ್ಜರೊಬ್ಬರೇ ಆಶ್ರಯದಾತರಾದರು.

ಇತ್ತ ಬಡತನದಲ್ಲಿಯೇ ಬೆಳೆಯುತ್ತ ಶಿವಯೋಗಿಗಳವರಿಗೆ ೯ ವರ್ಷ ತುಂಬಿತು. ತನ್ನ ಅಜ್ಜಂದಿರ ಗಾವಠೀ ಶಾಲೆಯಲ್ಲಿಯೇ ಅಕ್ಷರಾಭ್ಯಾಸವನ್ನು ಪ್ರಾರಂಭಿಸಿದರು. ಅಲ್ಲಿಯೇ ಮೂರನೆಯ ಇಯತ್ತೆಯವರಿಗೂ ಸಾಗಿತು. ನಂತರ ಕಜ್ಜರಿ ಗ್ರಾಮಕ್ಕೆ ಬಂದು ಹಿರೇ ಮಠದ ರಾಚಯ್ಯನೆಂಬುವರ ನೆರವಿನಿಂದ ಮಹದೇವಪಂತ ಜೋಗಳೆಕರ್

ಎಂಬ ಮಾಸ್ತರ ಬಳಿ ಅಭ್ಯಾಸವನ್ನು ಮುಂದುವರಿಸಿ 'ಮುಲ್ಕೀ' ಪರೀಕ್ಷೆಯನ್ನು ಕಟ್ಟಿ
ದರು. ಆದರೆ ಆ ಪರೀಕ್ಷೆಯಲ್ಲಿ ಮಾತ್ರ ಉತ್ತೀರ್ಣರಾಗಲಿಲ್ಲ. ಅದು ಲೋಕಕ್ಕೆ
ಉಪಕಾರವೇ ಆಯ್ತು. ಸ್ವಾರ್ಥಕ್ಕಾಗಿ ವೃತ್ತಿಯನ್ನು ಹಿಡಿಯುವುದು ತಪ್ಪಿ ಸಮಾಜ
ದ ಉದ್ಧರಣ ಕಾರ್ಯದಲ್ಲಿ ಕಾರಣಕರ್ತರಾದರು. ನಿಜಗುಣ ಶಿವಯೋಗಿಗಳ ಷಟ್
ಶಾಸ್ತ್ರಗಳನ್ನು ಅಧ್ಯಯನ ಮಾಡತೊಡಗಿದರು.

**ಸಿದ್ಧಾರೂಢರ ಮಠಕ್ಕೆ:** ನಂತರ ಹುಬ್ಬಳ್ಳಿ ಆರೂಢರಲ್ಲಿ ಪಂಚದಶಿ, ವಿಚಾರ
ಸಾಗರ, ಪರಮಾನುಬೋಧೆ, ಮುಂತಾದ ಗ್ರಂಥಗಳನ್ನು ಆಳವಾಗಿ ಅಧ್ಯಯನ
ಮಾಡತೊಡಗಿದರು. ಘನ ವೈರಾಗಿಗಳಾದ ಎಮ್ಮಿಗನೂರು ಜಡ ಸಿದ್ಧೇಶ್ವರರ ದರ್ಶನ
ಮಾಡಿ ಶಾಸ್ತ್ರ ವಿಷಯಿಕವಾದ ಅನುಮಾನಗಳನ್ನು ಪರಿಹಾರ ಮಾಡಿಕೊಂಡರು.
ಹೀಗೆ ಹುಬ್ಬಳ್ಳಿ ಆರೂಢ ಮಠದಲ್ಲಿ ವ್ಯಾಸಂಗ ಮಾಡುತ್ತಿರುವ ಕಾಲಕ್ಕೆ ಎಳಂದೂರು
ಬಸವಲಿಂಗ ಸ್ವಾಮಿಗಳು ದೇಶ ಪರ್ಯಟನದಿಂದ ಅಲ್ಲಿಗೆ ಬಂದರು. ಅಲ್ಲಿ ಅವರ
ಪರಿಚಯವಾಗಿ ಅಲ್ಲಿ ತಮ್ಮ ಜನ್ಮಾದಿ ವಿಷಯಗಳೆಲ್ಲವನ್ನೂ ಅವರೊಡನೆ ನಿವೇದಿಸಿ
ಕೊಂಡರು. ಆಗ ಎಳಂದೂರು ಶ್ರೀ ಗಳವರು 'ಈ ಹುಡುಗ ಶಿಥಿಲಾಚಾರವುಳ್ಳ ಈ
ಆರೂಢ ಮಠದಲ್ಲಿರುವುದು ಸರಿಯಲ್ಲ'ವೆಂದು ತಿಳಿದು ಶಿಷ್ಯನನ್ನಾಗಿ ಸ್ವೀಕರಿಸಿ
ಕರೆದುಕೊಂಡು ಶಂಭುಲಿಂಗನ ಬೆಟ್ಟದತ್ತ ಬಂದರು. ಅಲ್ಲಿ ಕೆಲವು ಕಾಲ ಅನುಷ್ಠಾನ
ಮಾಡಿ ಪುನಃ ದೇಶ ಪರ್ಯಟನ ಮಾಡುತ್ತಾ ಧಾರವಾಡದಲ್ಲಿ ಅಣ್ಣಿಗೇರಿ ಗ್ರಾಮಕ್ಕೆ
ಬಂದು ಅಲ್ಲಿ ಶಿವ ಸಾಯುಜ್ಯವನ್ನು ಪಡೆದರು. ಗುರುವಿಯೋಗದಿಂದ ಇವರು ದುಃಖಿ
ತರಾಗಿ ಮತ್ತೆ ಅನುಷ್ಠಾನಕ್ಕೆ ಉಳವಿ ಪ್ರಾಂತ್ಯದ ಗುರುಬಸವ ಸ್ವಾಮಿಗಳ ಗದ್ದುಗೆಗೆ
ಬಂದು ನೆಲಸಿದರು.

**ಹಾನಗಲ್‌ಮಠದ ಉತ್ತರಾಧಿಕಾರ:** ಇತ್ತ ಧಾರವಾಡ ಜಿಲ್ಲೆಯ ಹಾನಗ
ಲ್‌ನಲ್ಲಿ ಪೂರ್ವದಿಂದಲೂ ಒಂದು ವಿರಕ್ತಾಶ್ರಮ ಮಠವು ಪ್ರಸಿದ್ಧಿಯಾಗಿತ್ತು.
ಮಹಾತಪಸ್ವಿಗಳಾಗಿದ್ದ ಶ್ರೀ ಪಕೀರಸ್ವಾಮಿಗಳೆಂಬುವರು ಆ ಮಠದ ಸ್ವಾಮಿಗಳಾಗಿ
ದ್ದರು. ಅವರು ವಯೋವೃದ್ಧರಾಗಿದ್ದುದರಿಂದ ತಮ್ಮ ಉತ್ತರಾಧಿಕಾರಿಯ ಆಯ್ಕೆಯ
ಮನೋಬಯಕೆಯನ್ನು ತಮ್ಮ ಭಕ್ತರೆದುರು ಪ್ರಸ್ತಾಪಿಸಿದ್ದರು. ಆಗ ಸೊರಬ
ಪ್ರಾಂತದ ಉಳವಿಮಠದ ಗುರುಬಸವಯ್ಯ ಮತ್ತು ಕೆಂಡಪ್ಪಗೌಡರೆಂಬ ಭಕ್ತರು ಇವರ
ಹೆಸರನ್ನು ಸೂಚಿಸಿದರು. ಮತ್ತು ಯಾವುದೋನೆಪದಿಂದ ಫಕೀರಸ್ವಾಮಿಗಳವರ
ದರ್ಶನವನ್ನೂ ಮಾಡಿಸಿದರು. ನಿಮಿತ್ತಮಾತ್ರಾಗಮನದಿಂದಲೇ ಅವರ ಕೃಪಾಪಾತ್ರ
ವಾಗಿ ಹಾನಗಲ್ ಮಠದ ಅಧಿಕಾರಿಯಾದರು.

**ವೀರಶೈವಮಹಾಸಭೆ–ವಿದ್ಯಾಸಂಸ್ಥೆಗಳಸ್ಥಾಪನೆ:** ಅಧಿಕಾರಸ್ವಿಕಾರಮಾಡಿ
ದಕೊಡಲೆ ಶ್ರೀ ಶ್ರೀಗಳವರು ಹಗಲಿರುಳು ಸಮಾಜ ಸುಧಾರಣೆಯನ್ನು ಕುರಿತು ಚಿಂತಿ



ಸತೊಡಗಿದರು. ಧರ್ಮಜಾಗೃತಿಯನ್ನು ಕೈಗೊಂಡರು, ಸಮಾಜದ ವಿದ್ಯಾವಂತ,
ಪ್ರತಿಷ್ಠಿತ ಹಾಗೂ ಶ್ರೀಮಂತ ವ್ಯಕ್ತಿಗಳನ್ನು ಸಂಘಟಿಸಿದರು. ಅವರ ನೆರವಿನಿಂದ
ಸಮಾಜಸುಧಾರಣೆಗಾಗಿ ಜವಾಬ್ದಾರಿ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂದು ಸಂಕಲ್ಪಿ
ಸಿದರು. ಅದಕ್ಕಾಗಿ 1904 ನೆಯ ಇಸ್ವಿ ಮೇ, ತಿಂಗಳಲ್ಲಿ 'ವೀರಶೈವಮಹಾಸಭೆಯ'
ನ್ನು ಸ್ಥಾಪಿಸಿದರು. ಅವರ ಜೊತೆಯಲ್ಲಿಯೇ ಸಮಾಜದ ಮಕ್ಕಳ ವಿದ್ಯಾಭ್ಯಾಸಕ್ಕಾಗಿ
ದೊಡ್ಡಫಂಡನ್ನು ಕೂಡಿಸಿ ಲಿಂಗಾಯತ ಎಜುಕೇಷನ್ ಸೊಸೈಟಿ ಎಂಬ ಸಂಸ್ಥೆಯನ್ನು
ಸ್ಥಾಪಿಸಿ ವಿದ್ಯಾಪ್ರಸಾರವನ್ನು ಕೈಗೊಂಡರು. ಧಾರ್ಮಿಕ ವಿದ್ಯಾಭ್ಯಾಸಕ್ಕಾಗಿ
ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿದರು.

**ಶಿವಯೋಗಿ ಮಂದಿರದ ಸ್ಥಾಪನೆ :–** ಗಿಡದ ಬುಡಕ್ಕೆರೆದ ನೀರು ಶಾಖೋ
ಪಶಾಖೆಗಳಿಗೆ ಹರಿದು ಗಿಡವನ್ನು ಸೊಂಪಾಗಿಸುವಂತೆ ಸಮಾಜದ ವೃಕ್ಷದ ಬೇರುಗಳಂ
ತಿರುವ ಗುರುಮಾರ್ಗವನ್ನು ತಯಾರುಮಾಡಿದರೆ ಸಮಾಜವು ಹಸನಾಗುವುದೆಂಬ
ಅಂಶವನ್ನು ಮನಗಂಡು ಶ್ರೀ ಶ್ರೀಗಳು ಅದಕ್ಕಾಗಿ ಯೋಗಸಂಸ್ಥೆಯೊಂದನ್ನು ಸ್ಥಾಪಿಸಿ
ಬೇಕೆಂದು ಯೋಚಿಸಿದರು. ಸಂಕಲ್ಪಮಾತ್ರೋದಯಸಿದ್ಧರಾದ ಶ್ರೀ ಶ್ರೀಗಳವರಿಗೆ
ಅದಕ್ಕಾಗಿ ಹಣವನ್ನು ಸಂಗ್ರಹಿಸುವುದೂ ಕಷ್ಟವಾಗಲಿಲ್ಲ. ಬಾಗಲಕೋಟೆ ಮಲ್ಲಪ್ಪ
ನವರಂಥವರ ನೆರವಿನಿಂದ ಮಹಾತಪಸ್ವಿಗಳಾದ ಇಳಕಲ್ಲು ಮಹಾಂತಸ್ವಾಮಿಗಳವರ
ಮಾರ್ಗದರ್ಶನದಲ್ಲಿ ೧೯೦೯ರ ವೈಶಾಖಶುದ್ಧ ರಸಸಪ್ತಮಿಯಂದು ಮಲಾಪಹಾರಿ
ನದಿಯ ಪುಣ್ಯ ದಡದಲ್ಲಿ ಪ್ರಕೃತಿಯರಮ್ಯ ಮಡಿಲಲ್ಲಿ ಪ್ರಶಾಂತ ವಾತಾವರಣದಲ್ಲಿ,
ಬಿಲ್ವವೃಕ್ಷದ ತೋಪಿನಲ್ಲಿ ಶಿವಯೋಗಮಂದಿರಕ್ಕೆ ಲಿಂಗಮುದ್ರೆಯನ್ನು ಹಾಕಿದರು.
ಶಿವಯೋಗಮಂದಿರದ ಸ್ಥಾಪನೆಯಾದದ್ದೇತಡ ನಾಡಿನ ಮೂಲೆಮೂಲೆಗಳಿಂದ ವಟು
ಗಳು ಸಾಧಕರು, ಅನುಭವಿಗಳು, ಅಧ್ಯಾಪಕರು. ಗ್ರಂಥಶೋಧಕರು ಬಂದು ನೆಲಸತೊ
ಡಗಿದರು. ಅಲ್ಲಿ ಯೋಗಸಾಧನೆಯ ಜೊತೆಗೆ ಧಾರ್ಮಿಕ ಶಿಕ್ಷಣ, ಸಂಗೀತ, ಸಾಹಿತ್ಯಾದಿ
ವಿಷಯಗಳಲ್ಲಿ ಅಧ್ಯಯನ ಮಾಡತೊಡಗಿದರು. ಶಿವಯೋಗಿಗಳನ್ನು ತರಬೇತುಗೊಳಿ
ಸುವ ಕೇಂದ್ರವಾಯಿತು. ಹೆಚ್ಚೇನು ಶಿವಯೋಗ ಮಂದಿರದ ಬೆಳಗು ನಾಡೊಳ
ಗೆಲ್ಲಾ ಬೆಳಗಿತು.

ಹಾನಗಲ್ಲ ಲಿಂ. ಕುಮಾರ ಶಿವಯೋಗಿಗಳು ಗುರುಬಳಿವಿಡಿದು ಬಂದ ಜೋಳಿಗೆ
ಯನ್ನು ತನಗಾಗಿ ಬಳಸದೆ ಲೋಕಕ್ಕಾಗಿ, ಲೋಕಕಲ್ಯಾಣಕ್ಕಾಗಿ ಉಪಯೋಗಿಸಿದ
ಮಹಾಮಹಿಮರು. ಇಂಥ ಪುಣ್ಯ ಶ್ಲೋಕರು 1930 ರಲ್ಲಿ ಶಿವೈಕ್ಯರಾದರು. ಈ
ಪ್ರಾತಃ ಸ್ಮರಣೀಯರ ನೆನಪೇ ಒಂದು ಪುಣ್ಯ.

[ಸಾಧಾರ : 'ಬೆಳಗು' ಶಿವಯೋಗಮಂದಿರದ ಸ್ಮಾರಕ ಸಂಚಿಕೆ 1960]

ಮುಂದುವರಿದ ಲೇಖನ

# ಜಗದ್ದರ್ಶನ ಮಾಲೆ — ೯

—ಎಂ. ಜಿ. ನಂಜುಂಡಾರಾಧ್ಯ

**ಸೃಷ್ಟಿಕ್ರಮ :**

ಯೋಗ ಸಂಪ್ರದಾಯದಂತೆ ಶಿವನಿಂದ ಭೈರವ, ಅವನಿಂದ ಶ್ರೀಕಂಠ, ಶ್ರೀಕಂಠನಿಂದ ಸದಾಶಿವ, ಸದಾಶಿವನಿಂದ ಈಶ್ವರ, ಈಶ್ವರನಿಂದ ರುದ್ರ, ರುದ್ರನಿಂದ ವಿಷ್ಣು, ವಿಷ್ಣುವಿನಿಂದ ಬ್ರಹ್ಮರು ಪ್ರಕಟವಾದುದಾಗಿ ತಿಳಿದು ಬಂದಿದೆ. ಇದು ಮಂತ್ರಶಾಸ್ತ್ರಕ್ಕೂ ಸಮ್ಮತ ಆದರೆ ಅವಧೂತರು ಹೇಳುವ ಕ್ರಮವು ಬೇರೆ, ಅವರ ಕ್ರಮದಂತೆ ಈ ಕ್ರಮಗಳೆಲ್ಲ ಯೋಗದಿಂದ ಬಂದದ್ದು. ಆದ್ದರಿಂದ ಇವೆಲ್ಲಕ್ಕೂ ಯೋಗವೇ ಮೂಲ. ಅವಧೂತನಿಂದ ಭಿಕ್ಷುಕ' ಭಿಕ್ಷುಕನಿಂದ ಬ್ರಹ್ಮಚಾರಿ, ಬ್ರಹ್ಮಚಾರಿಯಿಂದ ಗೃಹಸ್ಥರು ಎಂದು ಹೇಳಲಾಗಿದೆ. ಒಂದೊಂದು ಗುಣ–ಲಕ್ಷಣ ಹೀನವಾಗಿ ಇದರ ಏರ್ಪಾಡು. ಇದಕ್ಕೆ ಸಂತಾನ ಎಂದು ಹೆಸರು.

ಗೃಹಸ್ಥ ಮತ್ತು ಅವಧೂತರಲ್ಲಿ ಯಾರು ಗೌಣ ಮತ್ತು ಯಾರು ಮುಖ್ಯ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಒಂದು ದೃಷ್ಟಿಯಿಂದ ಕಾರಣರೂಪನಾಗಿರುವ ಗೃಹಸ್ಥ ಮುಖ್ಯ. ಸಾಧ್ಯ ರೂಪನಾದ ಅವಧೂತನು ಗೌಣ. ಆದರೆ ಜ್ಞಾನಿಗಳ ದೃಷ್ಟಿಯಿಂದ ಸಾಧನ (ಕಾರಣ) ರೂಪನಾದ ಗೃಹಸ್ಥನಿಗಿಂತ ಸಿದ್ಧಿ (ಫಲ) ರೂಪನಾದ ಅವಧೂತನೇ ಶ್ರೇಷ್ಠ.

**ಆಚಾರ – ವಿಚಾರ**

ತತ್ವ ಜ್ಞಾನಿಗಳು ಆಚಾರ ಮತ್ತು ವಿಚಾರಗಳಲ್ಲಿ ವಿಚಾರಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಈ ಸಿದ್ಧಾಂತದಲ್ಲಿ ಆಚಾರವೇ ಇಲ್ಲವೆಂದಲ್ಲ. ಆದರೆ ಅಲ್ಲಿ ವಿಚಾರ ಪೂರ್ವಕವಾದ ಆಚಾರಕ್ಕೆ ಬೆಲೆ ಹೆಚ್ಚು. ಈ ದಿಸೆಯಲ್ಲಿ ಇಲ್ಲಿ ತತ್ವ ವಿಚಾರವೇ ಮುಖ್ಯ ಉಳಿದ ಆಚಾರಗಳು ಗೌಣ.

ಆಚಾರ ಸ್ವರೂಪ: ಪ್ರಾತಃ ಕಾಲದಲ್ಲೆದ್ದು ಗುರುವಂದನೆ ಮಾಡಿ, ಶೌಚಾದಿಗಳನ್ನು ಮುಗಿಸಬೇಕು. ಸಂಜೆ ಶುಚಿರ್ಭೂತನಾಗಿ ತತ್ಕಾಲ ಪೂಜೆ ಎಸಗಬೇಕು. ಬಹಿರ್ದೇಶಕ್ಕೆ ಹೋಗಿ ಬಂದ ಮೇಲೆ ೧೧ ಸಲ ಮೃತ್ತಿಕಾ ಶೌಚ ಮಾಡಬೇಕು.

ಒಂದೆರಡು ಕೊಡ ನೀರಿನಿಂದ ಸ್ನಾನ. ಇದಷ್ಟೆ ಆಚಾರ. ಇದಕ್ಕಿಂತ ಹೆಚ್ಚಿನದು ಅತ್ಯಾಚಾರ. ಅದು ನಿಷಿದ್ಧ.

ಮಹಾ ಸಿದ್ಧರು ಯೋಗಕ್ಕೆ ಮಹತ್ವ ಕೊಟ್ಟಿದ್ದಾರೆ. ಅಸತ್ಯವಾದ ಭ್ರಮೆ ಅವರಿಗೆ ಬೇಡ. ಯೋಗಿಗಳ ಮತದಲ್ಲಿ ಪ್ರಾರಬ್ಧ ಕರ್ಮಕ್ಕಿಂತ ಯೋಗಸಾಧನೆ ಮುಖ್ಯ. ಇವರಿಗೆ ಶೃಂಗಾರವು ವರ್ಜ್ಯ. ಹಿಂದೆ ಶಂಕರಾಚಾರ್ಯರು ಶೃಂಗಾರ ಪರಿಚಯಕ್ಕಾಗಿ ರಾಜನ ಶರೀರವನ್ನು ಪ್ರವೇಶಿಸಬೇಕಾಯಿತು. ಏಕೆಂದರೆ ಸಂನ್ಯಾಸಿ ಶರೀರವು ಸ್ತ್ರೀ ಸಂಗಕ್ಕೆ ಅನರ್ಹ ಎಂಬುದು ಇದರ ತಾತ್ಪರ್ಯ. ಆದರೇನು? ಶಂಕರರ ಮತದಲ್ಲಿ ಆತ್ಮರು ಆ ಎರಡೂ ಶರೀರಗಳಲ್ಲಿಯೂ ಒಂದೇ ತಾನೆ! ಎಂಬುದನ್ನು ಅವರು ಯೋಚಿಸಿದಂತೆ ಕಾಣುವುದಿಲ್ಲ.

ಶ್ರೀನಾಥ ಸೂತ್ರದಲ್ಲಿ ಯೋಗಿಯು ಆಚಾರ ಮತ್ತು ಬ್ರಹ್ಮ ವಿಚಾರಗಳೆರಡರಲ್ಲಿಯೂ ಇರುವನೆಂದು ಹೇಳಿದೆ. "ಆಚಾರೇ ಬ್ರಹ್ಮ ವಿಚಾರೇ ಯೋಗೀತಿ"– ಶ್ರೀನಾಥ ಸೂತ್ರಂ ಆಚಾರವು ಬ್ರಹ್ಮ ವಿಚಾರಕ್ಕೆ ಹಾದಿ. ಯೋಗ ಮತ್ತು ಭೋಗಗಳಲ್ಲಿ ಮುಕ್ತಿಗೆ ಯೋಗವೇ ಅಗತ್ಯವೆಂದು ಇವರ ಮತ.

ದ್ವೈತ – ಅದ್ವೈತ

ದ್ವೈತವೇ ಸರಿ ಎಂದು ಕೆಲವರೂ, ಅದ್ವೈತವೇ ಸರಿಯೆಂದು ಕೆಲವರೂ ವಾದಿಸುತ್ತಾರೆ. ಶರೀರ ಮತ್ತು ಶರೀರಿ[ಆತ್ಮ]ಗಳಲ್ಲಿ ದ್ವೈತವಿದೆ. ಅದ್ವೈತಿಗಳು ಶರೀರವು ಮಿಥ್ಯೆ ಎಂದು ಹೇಳುತ್ತಾರೆ, ಚೈತನ್ಯ ಮತ್ತು ಜಡ ಶರೀರ ಎರಡೂ ಸೇರಿ ಪರಿಪೂರ್ಣ ವಸ್ತು. ಇದು ಪರಮಾದ್ವೈತವೆಂದು ಮಹಾ ಸಿದ್ಧರ ಮತ. ಸರ್ವಾತೀತಪಾದ ನಾಥ ತೇಜಸ್ಸು ಚಕ್ರವರ್ತಿ.

ಜ್ಞಾನಿಗಳ ಸ್ವತಂತ್ರ ಜ್ಞಾನವು ಕರ್ಮನಿರಪೇಕ್ಷ ಎಂದು ಕೆಲವರ ಮತ. ಕರ್ಮದಿಂದ ಚಿತ್ತಶುದ್ಧಿ, ಆಮೇಲೆ ಕರ್ಮತ್ಯಾಗ ಎಂದು ಅವರು ಸಾಧಿಸುತ್ತಾರೆ. ಜ್ಞಾನದಿಂದ ಮುಕ್ತಿ ಎಂದು ಹೇಳಲಾಗಿದೆ. ವ್ಯವಾಹಾರದಲ್ಲಿ ಮಗ್ನರಾಗಿ ಮಾತಿನಲ್ಲಿ ನಾನು ಬ್ರಹ್ಮ ಎಂಬುವರು ಉಭಯ ಭ್ರಷ್ಟರು.

ಗೃಹ ಕರ್ಮ ತವಾಸಕ್ತಮಹಂ ಬ್ರಹ್ಮೇತಿವಾದಿನಂ
ಕರ್ಮ ಬ್ರಹ್ಮೋಭಯ ಭ್ರಷ್ಟಂ ತಂ ತ್ಯಜೇಪಂತ್ಯಜಂ ಯಥಾ ॥

## ಮಹಾಸಿದ್ಧರು ಗಾರ್ಹಸ್ಥ್ಯದಿಂದ ದೂರವಿರಲು ಕಾರಣವೇನು

ಸ್ತ್ರೀ ಇಲ್ಲದೆ ಗಾರ್ಹಸ್ಥ್ಯವಿಲ್ಲ. ಸ್ತ್ರೀಯೇ ಗೃಹಸ್ಥಧರ್ಮದ ಮೂಲ. ತಿಂಗಳಿಗೆ



ಮೂರುದಿನ ಋತುಧರ್ಮ. ಸಂತಾನಕ್ಕಾಗಿ ಋತುದಾನ. ಸುಖಕ್ಕಾಗಿ ವಿಷಯೋಪಭೋಗ. ಗೃಹವಾಸ, ಭೋಜನ, ಶರೀರ ಪುಷ್ಟಿ, ಅದರಿಂದ ಕಾಮೋದ್ದೀಪನ. ಅದರಿಂದ ಭೋಗ ಇತ್ಯಾದಿಗಳು ಯೋಗ ಸಾಧನೆಗೆ ಕಂಟಕಗಳೆಂದು ಮಹಾಸಿದ್ಧರ ಭಾವನೆ, ಆದಕ್ಕಾಗಿ ಅವರು ಗಾರ್ಹಸ್ಥ್ಯದಿಂದ ದೂರ ಸರಿದಿದ್ದಾರೆ,

ಈ ಸಿದ್ಧರ ಇಷ್ಟದೈವ ನಾಥಜೀ. ಅವನು ಸ್ತ್ರೀ ಪರಿಗ್ರಹ ಮಾಡಿಕೊಳ್ಳಲಿಲ್ಲ. ಸಮಸ್ತ ದೇವತೆಗಳು ಮನು ಮುನಿಗಳೆಲ್ಲರೂ ಸ್ತ್ರೀ ವಶರೇ. ನಾಥನೊಬ್ಬನೇ ಮಾಯೆಯನ್ನು ಜಯಿಸಿದವನು. ಈ ಬಗ್ಗೆ ಭರ್ತೃಹರಿಯು —

ಶಂಭು ಸ್ವಯಂಬು ಹರಯೋ ಹರಿಣೇಕ್ಷಣಾನಾಂ
ಯೇನಾಽ ಕ್ರಿಯಂತ ಸಹಸಾ ಗೃಹಕುಂಭ ದಾಸಾಃ ।
ವಾಚಾಮಗೋಚರ ಚರಿತ, ವಿಚಿತ್ರತಾಯ
ತಸ್ಮೈ ನಮೋ ಭಗವತೇ ಮಕರಧ್ವಜಾಯ ॥

ಎಂದು ಕಾಮದೇನಿಗೆ ವಂದಿಸಿದ್ದಾನೆ. ಆದ್ಧರಿಂದ ಗೃಹಸ್ಥನು ಎಷ್ಟೇ ಜ್ಞಾನಿಯಾದರೂ ಸ್ತ್ರೀ ವಶನೇ. ವೈರಾಗ್ಯ ಬೇಕಾದವನು ಅವಧೂತನಾಗಲೇಬೇಕು. ಈ ದಿಸೆಯಲ್ಲಿ ಮೀನನಾಥನ ಉಕ್ತಿಯೊಂದಿದೆ —

ಹರಕೋಪಾನಲೇನೈವ ಭಸ್ಮೀಭೂತಃ ಕೃತಃ ಸ್ಮರಃ ।
ಅರ್ಧನಾರೀ ಶರೀರೋಹಿ ತೇನ ತಸ್ಮೈನಮೋಸ್ತುತೇ ॥

ಎಂದರೆ ಕಾಮನು ಹರನ ಹಣೆಗಣ್ಣ ಬೆಂಕಿಯಿಂದ ಸುಟ್ಟರೂ ಅವನು ಶಿವನನ್ನು ಅರ್ಧನಾರೀ ಶರೀರನನ್ನಾಗಿ ಮಾಡಿದ. ಎಂದಮೇಲೆ ಶಿವ–ಶಕ್ತಿಗಳನ್ನು ಅಗಲಿಸುವುದು ದುಸ್ತರ. ಚಂದ್ರ ಚಂದ್ರಿಕೆಗಳಂತೆ, ಸೂರ್ಯ ಪ್ರಕಾಶಗಳಂತೆ ಶಿವ–ಶಕ್ತಿಗಳಿವೆ ಅವಿನಾಭಾವ ಸಂಬಂಧವುಂಟು. ಮಹಾಸಿದ್ಧರು ಕಾಮೋಪಭೋಗಕ್ಕೆ ಸಮರ್ಥರಾದರೂ ಅವರು ಅದನ್ನು ತ್ಯಾಗ ಮಾಡುವುದರಲ್ಲಿಯೇ ವಿಶೇಷವಾದ ಆಸಕ್ತಿಯುಳ್ಳವರು. ಅವರ ಭೋಗವು ಸಂಸಾರಿಗಳ ಭೋಗದಂತೆ ಅತ್ಯಾಸಕ್ತವಾದದ್ದಲ್ಲ. ಅದು ಅನಾಸಕ್ತಿ ಯೋಗಕ್ಕೆ ಸೇರಿದ್ದು.

## ಭಗವಂತನೆಂದರೆ ನಾಥನೇ !

ಷಡ್ಗುಣೈಶ್ವರ್ಯ ಸಂಪನ್ನನೇ ಭಗವಂತ. ಆ ಷಟ್‌ಗುಣಗಳು ಯಾವುವು ? ೧. ಸಮಗ್ರ ಐಶ್ವರ್ಯ, ೨. ಧರ್ಮ, ೩. ಯಶಸ್ಸು, ೪. ಶ್ರೀ, ೫. ಜ್ಞಾನ ಮತ್ತು ೬. ವೈರಾಗ್ಯಗಳು. ರುದ್ರ–ವಿಷ್ಣುಗಳು ಸ್ತ್ರೀ ಪರಿಗ್ರಹ ಮಾಡಿರುವುದರಿಂದ

ಅವರಲ್ಲಿ ಧರ್ಮ ವೈರಾಗ್ಯಗಳಿಲ್ಲ. ಆದ್ದರಿಂದ ಅವರು ಭಗವಂತ ಪದವಾಚ್ಯರಲ್ಲ. ಆ ಎಲ್ಲ ಐಶ್ವರ್ಯಗಳು ನಾಥನಲ್ಲಿ ಮಾತ್ರ ಇರುವುದರಿಂದ ನಾಥನೇ ಭಗವಂತ.

### ನಾಥ ಪಂಥದಲ್ಲಿ ಶಬ್ದ ಸೃಷ್ಟಿಕ್ರಮ

ಶಬ್ದವು ಮೊದಲು ಸೂಕ್ಷ್ಮವಾಗಿತ್ತು. ಅನಂತರ ಅದು ಸ್ಥೂಲರೂಪು ತಳೆಯಿತು. (ಪರಾ–ಪಶ್ಯಂತೀ-ಮಧ್ಯಮಾ–ವೈಖರಿಗಳ ಕ್ರಮಕ್ಕೆ ಹೋಲಿಸಿ) ಪ್ರಣವ-ಗಾಯತ್ರಿ ಮತ್ತು ಯೋಗಶಾಸ್ತ್ರಗಳು ಸೂಕ್ಷ್ಮ ಶಬ್ದಸೃಷ್ಟಿ; ಬ್ರಹ್ಮಗಾಯತ್ರಿ, ಮೂರು ವೇದಗಳು ಸ್ಥೂಲ ಶಬ್ದಸೃಷ್ಟಿ.

ಯೋಗಶಾಸ್ತ್ರದಿಂದ ತಂತ್ರವು ಹುಟ್ಟಿತು. ವೇದದಿಂದ ಸ್ಮೃತ್ಯಾದಿಗಳು ಹುಟ್ಟಿದವು. ನವನಾಥರ ನಂತರ ೧೨ಮಂದಿ ನಾಥರೂ ೮೦ಮಂದಿ ಸಿದ್ಧರೂ ಆದರು. ಅವರಿಂದ ದ್ವಾದಶ ಪಂಥವೂ, ಅನಂತರ ಸಿದ್ಧ ಪುರುಷರೂ ಉಂಟಾದರು. ಸದಾಶಿವ–ಭೈರವ, ಅವನಿಂದ ವಿಷ್ಣು- ಬ್ರಹ್ಮ–ಸೂರ್ಯ, ಚಂದ್ರ-ಇಂದ್ರಾದಿಗಳಾದರು. ಮತ್ತೆ ಯೋಗದಿಂದ ಪಾತಂಜಲ, ಸಾಂಖ್ಯಾದಿಗಳುಂಟಾದವು. ಆ ಯೋಗದಿಂದಲೇ ಜ್ಯೋತಿಷ್ಯ, ನ್ಯಾಯಾದಿಗಳು, ಧರ್ಮಶಾಸ್ತ್ರ, ವ್ಯಾಕರಣ, ಪುರಾಣಾದಿಗಳು, ಹೀಗೆ ಈ ಪಂಥದಲ್ಲಿ ಪ್ರವೃತ್ತಿ ನಿವೃತ್ತಿ ಎಂಬ ಎರಡು ಮಾರ್ಗಗಳೂ ಇದೆ.

### ವರ್ಣಾಶ್ರಮಗಳಿಲ್ಲ

ನಾಥಪಂಥದಲ್ಲಿ ವರ್ಣಾಶ್ರಮಾದಿಗಳ ಅಂತರವಿಲ್ಲ. ದೇಹಾದಿ ಅಭಿಮಾನಗಳನ್ನು ಬಿಟ್ಟು ಪರಮನಾಥನ ಯಥಾರ್ಥ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡವನು ಸ್ವಯಂ ನಾಥಸ್ವರೂಪಿಯೇ ಆಗುತ್ತಾನೆ. ಗುಣಾತೀತನೇ ಮುಕ್ತಿಗೆ ಅಧಿಕಾರಿ.

### ಮುಕ್ತ್ಯುಪಾಯ

ಕೈವಲ್ಯೋಪನಿಷತ್ತಿನಲ್ಲಿ 'ಏಕಾಂತಸ್ಥಾನದಲ್ಲಿ ಸುಖಾಸನದಲ್ಲಿ ಸಶಿನ ಶರೀರಿಯಾಗಿ ಕುಳಿತು, ಇಂದ್ರಿಯಗಳನ್ನು ನಿಗ್ರಹಿಸಿ, ಪವಿತ್ರ ಮನಸ್ಸಿನಿಂದ ಧ್ಯಾನ ಮಾಡುವನೇ' ಅವಧೂತನು ಎಂದು ಹೇಳಿದೆ. ಮುಕ್ತಿ ಸಾಧನೆಗೆ ಆದಿನಾಥನ ಮುಖಾಂಬುಜದಿಂದ ನಿರ್ಗತವಾಗಿರುವ ಯೋಗಮಾರ್ಗವೇ ಮುಖ್ಯ.

'ಯೋಗಮಾರ್ಗಂ ಪಠೇನ್ನಿತ್ಯಂ ಕಿಮನ್ಯೈಃ ಶಾಸ್ತ್ರವಿಸ್ತರೈಃ ।
ಯತ್ ಸ್ವಯಂಚಾದಿನಾಥಸ್ಯ ನಿರ್ಗತಂ ವದನಾಂಬುಜಾತ್॥

(—ವಿವೇಕಮಾರ್ತಾಂಡೇ)



ತಿರುಳ್ಗನ್ನಡದ ತಿರುಕ

# ದೊಡ್ಡಮನಸ್ಸಿನ ಉತ್ತಂಗಿ ಚೆನ್ನಪ್ಪನವರು

—ಎಸ್. ಆರ್. ಗುಂಜಾಳ

ಸರ್ವಜ್ಞ–ಉತ್ತಂಗಿ ಚೆನ್ನಪ್ಪ ಎರಡೂ ಜತೆ ಜತೆಗೇ ನೆನಪಿಗೆ ಬರುವ ಹೆಸರುಗಳು. ಶರಣ ಸಂಸ್ಕೃತಿಯಲ್ಲಿ ಅರಳಿದ ಶಿವಲಿಂಗ ಪುಷ್ಪ ಸರ್ವಜ್ಞ. ಕನ್ನಡದ ಬದುಕು ಕಂಡ ಭಾಗ್ಯ ವಿಶೇಷ. ಆದರೆ ಕನ್ನಡ ಜನತೆಯ ಡೊಂಕು ಅಂಥವನನ್ನೂ ಮರೆತದ್ದು, ಅದನ್ನೂ ಮೆಟ್ಟಿ ಬೆಳೆದದ್ದು ಮರೆಯಬಾರದು ಸರ್ವಜ್ಞನನ್ನು ಎಂಬ ದಿಟ್ಟ ನಿಲವು. ಆ ನಿಲವು ಉತ್ತಂಗಿಯವರದ್ದು. ಅವರಿಂದಾಗಿ ಸರ್ವಜ್ಞನ ವಚನಗಳು ಬೆಳಕು ಕಂಡವು. ಕನ್ನಡ ಸಾಹಿತ್ಯ ಕಣಜಕ್ಕೆ ಶ್ರೀಮಂತಿಕೆ ಬಂತು ಅವರಿಂದ.

ಉತ್ತಂಗಿ ಒಂದು ಹಳ್ಳಿ, ಬಳ್ಳಾರಿ ಜಿಲ್ಲೆ ಚೆನ್ನಪ್ಪನವರ ತಾತನವರ ಊರು. ತಾತನ ಹೆಸರೂ ಚೆನ್ನಪ್ಪಗೌಡನೆಂದೇ. ಅವರಿಗೆ ಇಬ್ಬರು ಹೆಂಡಿರು ಮೊದಲ ಹೆಂಡತಿಯಲ್ಲಿ ಜನಿಸಿದ ಗಂಡು ಮಗು ದಾನಿಯೇಲಪ್ಪ. ಈ ವೇಳೆಗೆ ಚೆನ್ನಪ್ಪಗೌಡರ ಧರ್ಮಾಂತರ, ಕ್ರೈಸ್ತ ಮತಾವಲಂಬಿ ಮೊದಲಿಗೆ ವೀರಶೈವರು. ದಾನಿ ಯೇಲಪ್ಪನವರ ಮಗನೇ ಉತ್ತಂಗಿ ಚೆನ್ನಪ್ಪ. ಅಕ್ಟೋಬರ್ 28–1881 ರಂದು ಜನನ. ತಾತನ ಪಡಿಯಚ್ಚು, ಧರ್ಮಶ್ರದ್ಧೆ, ದೈವಭಕ್ತಿ, ಪರೋಪಕಾರಬುದ್ಧಿ, ಚಿಕಿತ್ಸಕ ವಿಚಾರ, ವಿನಮ್ರತೆ, ನಿರಾಡಂಬರ ಆಚಾರ, ಪ್ರಾಮಾಣಿಕತೆ ಎಲ್ಲವೂ ಅಜ್ಜನ ಬಳುವಳಿ ಮೊಮ್ಮಗನಿಗೆ.

ಬೆಟಗೇರಿ ಚೆನ್ನಪ್ಪನವರ ಶಾಲಾಜೀವನಕ್ಕೆ ಮೊದಲ ಮಣೆ ಹಾಕಿದ್ದು. ತಂದೆ ದಾನಿ ಯೇಲಪ್ಪನವರು. ಶಿಕ್ಷಕರ ಬೆಟಗೇರಿಯಿಂದ ಧಾರವಾಡಕ್ಕೆ ಪ್ರಯಾಣ. ಇಂಗ್ಲಿಷ್ ಶಿಕ್ಷಣ, ಮಿಷನ್ ಸ್ಕೂಲ್‌ನಲ್ಲಿ ಮ್ಯಾಟ್ರಿಕ್ ಪರೀಕ್ಷೆ. ನಪಾಸು, ತಂದೆ–ತಾಯಿಗಳ ದುಃಖ, ಉದ್ಯೋಗಕ್ಕಾಗಿ ಅಲೆತ, ಫಲ ಬರಿಗೈ. ಕೊನೆಗೆ ಮಂಗಳೂರಿನ ಬಾಸೆಲ್ ಮಿಷನ್ನಿನ ದೈವಜ್ಞಾನ ಶಾಲೆಯ ಆಶ್ರಯ. ಅಲ್ಲಿನ ಶಿಷ್ಟಾಚಾರದಿಂದ ಒಳಗೊಳಗೇ ವ್ಯಥೆ. ಪರಿಣಾಮ ಗ್ರಂಥಗಳ ಬಾಂಧವ್ಯ, ಬಂದ ಫಲ ಭವ್ಯ, ಅದೇ ಕಾಲಕ್ಕೆ ಲಂಡನ್ನಿನ ಆರ್.ಪಿ.ಎ. ಸಂಸ್ಥೆಯ ಸದಸ್ಯ. ನಾಲ್ಕು ವರ್ಷಗಳ ದೈವಜ್ಞಾನ ಶಾಲೆಯ ಶ್ರೀಮಂತಾನುಭವದಿಂದ ಪ್ರಥಮ ವರ್ಗದ ಉತ್ತೀರ್ಣತೆ. ಅಪಾರ ಜ್ಞಾನದ ರತ್ನಗಣಿ ಈಗ ಚೆನ್ನಪ್ಪ.

1908 ಉದ್ಯೋಗ ಪ್ರಾರಂಭ, ಕ್ರೈಸ್ತ ಧರ್ಮೋಪದೇಶಕ, ಪ್ರಚಾರಕ, ಪರ ಧರ್ಮ ಖಂಡನೆಯಿಂದ ದೂರ. ಬದಲಾಗಿ ಅನ್ಯಧರ್ಮದಲ್ಲಿನ ಉದಾತ್ತ ವಿಚಾರಗಳ ಶ್ಲಾಘನೆ. ಪರಿಣಾಮ ವೃತ್ತಿ ಬಾಂಧವರಿಂದ ಕಿರುಕುಳ ಧರ್ಮಾಧಿಕಾರಿಗಳಿಂದ ಎಚ್ಚರಿಕೆ. ಸಮರ್ಥವಾದ ಉತ್ತರ ಅದಕ್ಕೆ ತಮ್ಮ "ಬನಾರಸಕ್ಕೆ ಬೆತ್ಲ ಹೇಮಿನ ವಿನಂತಿ" ಗ್ರಂಥ ಓದಿ ಎಂಬ ಸಲಹೆ. ಸರ್ವಜ್ಞನ ಸೇವೆಗೆ ಸಂದ ಫಲ "ಮಿಷನ್ ಸೇವೆಯಲ್ಲ" ಎಂಬ ಆರೋಪ. ಅದಕ್ಕಾಗಿ "ಕಿಟ್ಟೆಲ್ ಕೃತ ಕನ್ನಡ ನಿಘಂಟು" ಮತ್ತು "ಪ್ರಕ್ಕಾವ್ಯ ಮಾಲಿಕೆ"ಗಳ ದೃಷ್ಟಾಂತದ ಉಲ್ಲೇಖ. ಆರೋಪಿಸಿದ ಬಾಯಿ ಮುಚ್ಚಿತು, ಚೆನ್ನಪ್ಪನವರು ಪರಧರ್ಮ ಸಹಿಷ್ಣುಗಳು, ಉದಾರ ಚರಿತರು, ಅಪೂರ್ವ ವ್ಯಕ್ತಿಗಳು.

ಉತ್ತಂಗಿಯವರು "ಉತ್ತುಂಗ ಸಾಹಿತಿ" ಜೀವನದುದ್ದಕ್ಕೂ ಓದಿದರು ; ಬರೆದರು. ಅವರು ಬರೆದ ಗ್ರಂಥಗಳು ಮೂರು ವಿಧ ೧) ಕ್ರೈಸ್ತ ಧರ್ಮವನ್ನು ಕುರಿತ ಗ್ರಂಥಗಳು. ೨) ವೀರಶೈವ ಧರ್ಮವನ್ನು ಕುರಿತ ಗ್ರಂಥಗಳು. ೩) ಹಿಂದೂ ಧರ್ಮವನ್ನು ಕುರಿತ ಗ್ರಂಥಗಳು. "ಮೃತ್ಯುಂಜಯ", "ದೃಷ್ಟಾಂತ ದರ್ಪಣ", ಕ್ರಿಸ್ತನ ಜೀವನಕ್ಕೆ ಸಂಬಂಧಿಸಿದ ಕೃತಿಗಳು.

"ಪ್ರಿಯನು ಪ್ರೇಯಸಿಯ ಭಾಷೆಯನ್ನು ಕಲಿಯುವಂತೆ ನಾನು ಸರ್ವಜ್ಞನಿಗಾಗಿ ಕನ್ನಡವನ್ನು ಕಲಿತೆ, ಕನ್ನಡ ವ್ಯಾಕರಣ, ಛಂದಸ್ಸು, ಕಾವ್ಯ, ಅಲಂಕಾರ ಮುಂತಾದ ಶಾಸ್ತ್ರ ಗ್ರಂಥಗಳನ್ನು ಓದಿದ್ದು ಸರ್ವಜ್ಞನ ಕಾರ್ಯವನ್ನು ಕೈಗೊಂಡ ನಂತರ ನಾನು ವೀರಶೈವ ಧರ್ಮವನ್ನು ಅರಿತುಕೊಳ್ಳಲು ಪ್ರಯತ್ನಿಸಿದ್ದು ಸರ್ವಜ್ಞನಿಗಾಗಿಯೆ"–ಎಂದಿದ್ದಾರೆ ಅವರು. ಫಲವಾಗಿ ಬೆಳಕು ಕಂಡವು "ಮೋಳಿಗೆಯ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳು" ಹಾಗೂ "ಆದಯ್ಯನ ವಚನಗಳು" "ಅನುಭವ ಮಂಟಪದ ಐತಿಹಾಸಿಕತೆ"; "ಸಿದ್ಧರಾಮ ಸಾಹಿತ್ಯ ಸಂಗ್ರಹ"ಗಳು ಅವರ ಶ್ರಮದ ಅನರ್ಘ್ಯ ಕೃತಿಗಳು. "ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ"–ಪಂಚಮರ ಉದ್ಧಾರವನ್ನು ಚಿಂತಿಸುವ ಕೃತಿ. "ಹಿಂದೂ ಸಮಾಜದ ಹಿತಚಿಂತಕ" ಅವರ ಇನ್ನೊಂದು ಕೃತಿ. ಜಾತಿ ಜಾಡ್ಯದಿಂದ ಭಾರತೀಯರು ದೂರಾಗಬೇಕೆಂಬ ಕಳಕಳಿಯನ್ನು ಹೊತ್ತ ದೀಪದ ಕಂಭ.

ಸರ್ವಜ್ಞನ ಆಸಕ್ತಿಗೆ ಕಾರಣವಾದದ್ದು ಚೆನ್ನಪ್ಪನವರಗೆ–ರೆ.ಜೆ.ಜೆ. ವುರ್ನರ್ ಕನ್ನಡ ಕಲಿಯಲು ಅವರಲ್ಲಿಗೆ ಬಂದದ್ದು. "ನಮಾಜ ಮಾಡಹೋಗಿ, ಮಸೀದಿಯೇ ಕೊರಳಿಗೆ ಬಿದ್ದಂತಾಯಿತು". ಸುಮಾರು ಎರಡು ಸಾವಿರ ವಚನಗಳನ್ನು ನಲವತ್ತು ಸಾವಿರ ಸಲ ಓದಬೇಕಾಯಿತು. ಆರೋಗ್ಯ ಕೆಟ್ಟಿತು, ಸಾವು ತನ್ನ ಕೈ ಸವರಲು ಮುಂದಾಯಿತು. ಪ್ರಾರ್ಥನೆ ಮಾಡಿಕೊಂಡರು ಆ ಸರ್ವಜ್ಞನಲ್ಲಿ. "ನಾನು ಈ ಕಾರ್ಯವನ್ನು ಸ್ವಾರ್ಥ, ಸ್ವಪ್ರತಿಷ್ಠೆಗೋಸ್ಕರ ಕೈಕೊಂಡಿರುವುದಾದರೆ ಅದನ್ನು ಇಲ್ಲಿಗೇ



ನಿಲ್ಲಿಸಿಬಿಡು. ಸರ್ವಜ್ಞನ ಸೇವೆ ದೇಶಸೇವೆ ಮತ್ತು ನಿನ್ನ ಉಪಾಸನೆಯೆಂದು ನಾನು ಕೈಕೊಂಡದ್ದಾದರೆ ಅಲ್ಪನಾದ ನನ್ನಿಂದ ಆ ಸೇವೆಯನ್ನು ಮಾಡಿಸಿಕೊಳ್ಳಲು ನೀನು ಇಷ್ಟಪಟ್ಟರೆ ನನ್ನನ್ನು ಇನ್ನೂ ಕೆಲವು ದಿವಸ ಉಳಿಸು"–ಎಂದು ಮೊರೆಯಿಟ್ಟರು. ಮೊರೆ ಕೇಳಿಸಿತು, ಸರ್ವಜ್ಞ ಕರ್ನಾಟಕದ ಮೃಗೇಂದ್ರನಾಗಿ ಹೊರಬಂದ.

ಸರ್ವಜ್ಞನ ವಚನಗಳು ಓದುಗನನ್ನು ರೇಗಿಸುತ್ತವೆ, ಇರಿಯುತ್ತವೆ, ಎಬ್ಬಿಸುತ್ತವೆ, ನಗಿಸುತ್ತವೆ, ಕಚಗುಳಿಯಿಡುತ್ತವೆ, ಕಣ್ಣೀರು ಬರುವಂತೆ ಮಾಡುತ್ತವೆ, ಮೂರು ಸಾಲಿನಲ್ಲಿ ಮೂರು ಲೋಕಗಳನ್ನು ಸೆರೆಹಿಡಿಯುತ್ತವೆ. ವಚನ ಸಂಸ್ಕೃತಿಯ ಉತ್ತ ಹೊಲದಲ್ಲಿ ಅರಳಿದ ಸುಮಧುರ ದಿಟ್ಟ ಆಶು ಕವಿ ಸರ್ವಜ್ಞ ಅವನ ಪರಿಚಯವಾದದ್ದು ಉತ್ತಂಗಿಯವರಿಂದ ಬಹುತೇಕ ಜನಸಮುದಾಯಕ್ಕೆ, ಸರ್ವಜ್ಞನಿಗಾಗಿಯೇ ಬಾಳನ್ನು ತೇದ ಪುಣ್ಯಜೀವಿ ಉತ್ತಂಗಿ. "ಸರ್ವಜ್ಞ ನನ್ನನ್ನು ಪ್ರಸಿದ್ಧ ಪಡಿಸಿದನೋ ಅಥವಾ ನಾನು ಸರ್ವಜ್ಞನನ್ನು ಪ್ರಸಿದ್ಧಪಡಿಸಿದೆನೋ ಎಂಬುದು ನನಗಿನ್ನೂ ಒಡೆಯಲಾಗದ ಒಗಟಾಗಿಯೇ ಉಳಿದಿದೆ." ಎಂದಿದ್ದಾರೆ ಉತ್ತಂಗಿಯವರು.

ಕಲ್ಬುರ್ಗಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗ ಅದರ ಅಧ್ಯಕ್ಷರಾದರು. ರೆವರೆಂಡ್ ಪದವಿಯ ತ್ಯಾಗ, ತತ್ವನಿಷ್ಠೆ ಅದಕ್ಕೆ ನಿಮಿತ್ತ, ಉದ್ದಾಮ ವಿದ್ವಾಂಸರು, ವಿನಯ ಸಂಪನ್ನರು, ತೆರೆದ ಮನಸ್ಸು, ಪರಿಶುದ್ಧ ಬದುಕು. ಎಲ್ಲ ಬಂದದ್ದು ಬಾಳಿನ ಬಡತನದಿಂದ. ಅದು ವರ ಎಂಬ ಘನ ಭಾವನೆ. ತಾನು "ತಿರುಳ್ಗನ್ನಡದ ತಿರುಕ"ನೆಂದೇ ಹೇಳಿಕೊಂಡರು. ಕನ್ನಡಕುಲ ಭೀಷ್ಮಾಚಾರ್ಯ, ಕರ್ಮಯೋಗಿ, ಫಿಲಾಸಫಿಯ ಪಕ್ವಾನ್ನ, ನಿಷ್ಕಾಮ ಕರ್ಮ, ಮೇಲಾದ ಸಂಶೋಧಕ, ಸರ್ವಜ್ಞ ಮರ್ಮಜ್ಞ, ಎಂದೆಲ್ಲಾ ಗುರುತಿಸಿಕೊಂಡ ಉತ್ತಂಗಿಯವರು "ವಚನ ವಾಙ್ಮಯವನ್ನೂ ಚೆನ್ನಾಗಿ ಅಧ್ಯಯನ ಮಾಡಿದವರಲ್ಲಿ ಮಿಗಿಲಾದವರು" – ಎಂಬ ಮುತ್ತಿನಂಥ ಮಾತುಗಳಿಗೆ ಸಾಕಾರವಾಗಿದ್ದರು. ಕನ್ನಡ ನಾಡಿನಲ್ಲಿ ಸರ್ವಜ್ಞನ ಹೆಸರಿರುವ ತನಕ ಉತ್ತಂಗಿಯವರ ಹೆಸರೂ ಹಸುರಾಗಿರುತ್ತದೆ.

---

### ಕೃತಜ್ಞತೆಗಳು

ತಾ|| 26.9.84. ಮತ್ತು 26.9.74.ರಂದು ಶ್ರೀ ಕ್ಷೇತ್ರದಲ್ಲಿ ಕಾಣಿಸಿಕೊಂಡ ಕಾಲರಾ ಬೇನೆಯನ್ನು ಶೀಘ್ರವಾಗಿ ತಡೆಗಟ್ಟಲು ಸಹಕರಿಸಿ, ತುರ್ತು ಚಿಕಿತ್ಸೆಯನ್ನು ನೀಡಿ ಉಪಕರಿಸಿದ, ಜಿಲ್ಲಾ ಆರೋಗ್ಯಾಧಿಕಾರಿಗಳನ್ನು ಅವರ ಸಿಬ್ಬಂದಿ ವರ್ಗದವರನ್ನು ಜಿಲ್ಲಾ ವೈದ್ಯಾಧಿಕಾರಿಗಳು ಮತ್ತು ಅವರ ಸಿಬ್ಬಂದಿ ವರ್ಗದವರನ್ನೂ, ಜಿಲ್ಲಾ ರಕ್ಷಣಾಧಿಕಾರಿಗಳು ಮತ್ತು ಅವರ ಸಿಬ್ಬಂದಿ ವರ್ಗದವರನ್ನೂ, ಹಾಗೂ ಸಹಕರಿಸಿದ ಎಲ್ಲ ಶ್ರೀ ಕ್ಷೇತ್ರಾಭಿಮಾನಿ ಬಂಧುಗಳನ್ನೂ ನಮ್ರವಾಗಿ ಸ್ಮರಿಸುತ್ತಾ 'ಸಿದ್ಧಗಂಗಾ' ತುಂಬು ಹೃದಯದ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ.

---

# ಪುರಾಣ ಮುನಿಗಳು-೯

## ಅರುಂಧತಿ

—ಸ. ರಾಮಕೃಷ್ಣ ಶಾಸ್ತ್ರಿ.

ನವ ವಿವಾಹಿತಳಾದ ವಧು ಸುದೀರ್ಘವಾದ ದಾಂಪತ್ಯ ಜೀವನವನ್ನು ಹೊಂದಿ ಬಾಳುವಂತಾಗಲಿ ಎಂಬ ಹಾರೈಕೆಯಿಂದ ಅವಳಿಗೆ ಅರುಂಧತಿ ನಕ್ಷತ್ರವನ್ನು ತೋರಿಸುವುದು ನಮ್ಮ ವೈವಾಹಿಕ ಸಂಪ್ರದಾಯಗಳಲ್ಲಿ ಒಂದು. ಸ್ವಯಂಭೂ ಮನುವಿನ ಮಗಳು ದೇವಹೂತಿಯನ್ನು ಮಹಾ ತೇಜಸ್ವಿಯೂ ಪವಿತ್ರನೂ ಆದ ಕರ್ದಮ ಋಷಿಗೆ ಕೊಟ್ಟು ವಿವಾಹ ಮಾಡಲಾಗುತ್ತದೆ. ಅವರ ದಾಂಪತ್ಯದಿಂದ ಒಂಬತ್ತು ಮಂದಿ ಹೆಣ್ಣು ಮಕ್ಕಳೂ ಶ್ರೀ ಹರಿಯ ಅಂಶದಿಂದ ಮಹರ್ಷಿ ಕಪಿಲನೂ ಜನಿಸುತ್ತಾರೆ. ಆ ಹೆಣ್ಣು ಮಕ್ಕಳಲ್ಲಿ ಅರುಂಧತಿಯೂ ಒಬ್ಬಳು. ಶ್ರೇಷ್ಠ ಪತಿವ್ರತೆಯರಲ್ಲಿ ಒಬ್ಬಳಾಗಿ ಅಖಂಡ ಸಿದ್ಧಿಯನ್ನು ಪಡೆದ ಅವಳು ಎಲ್ಲಾ ಸದ್ಗುಣಗಳನ್ನು ಮೈಗೂಡಿಸಿಕೊಂಡು ಆದರ್ಶ ಸಾಧ್ವಿ.

ಅರುಂಧತಿಯ ಜನನದ ಬಗೆಗೆ ಕಾಳಿಕಾ ಪುರಾಣದಲ್ಲಿ ವಿಭಿನ್ನ ಕತೆಯಿದೆ. ಒಂದು ಕಲ್ಪದಲ್ಲಿ ಬ್ರಹ್ಮನ ಮಾನಸಪುತ್ರಿಯಾಗಿ ಆಕೆ ಸಂಧ್ಯಾ ಎಂಬ ಹೆಸರಿನಿಂದ ಹುಟ್ಟಿದ್ದಳು. ಒಂದು ಸಲ ಮಂದಾಕಿನಿ ನದಿಯ ದಡದಲ್ಲಿ ತಪೋನಿರುತನಾದ ವಸಿಷ್ಠನನ್ನು ಆಕೆ ನೋಡಿದಳು. ಕಠಿಣ ತಪಶ್ಚರ್ಯೆಯ ಸಿದ್ಧಿಯಿಂದ ತೇಜಸ್ವಿಯಾಗಿ ಮಿಂಚುತ್ತಿದ್ದ ಅತನನ್ನು ನೋಡುತ್ತಲೇ ತಾನು ಭೂಲೋಕದಲ್ಲಿ ಜನಿಸಿ ವಸಿಷ್ಠನ ಪತ್ನಿಯಾಗಬೇಕೆಂಬ ಆಸೆ ಅವಳಿಗುಂಟಾಯಿತು.

ಮೇಧಾತಿಥಿ ಎಂಬ ಋಷಿಯು ಸಂತಾನ ಸಿದ್ಧಿಗಾಗಿ ಜ್ಯೋತಿಷ್ಟ ಎಂಬ ಯಾಗವನ್ನು ಮಾಡಿದ. ಸಂಧ್ಯಾ ಎಳೆಯ ಹೆಣ್ಣುಮಗುವಾಗಿ ಆ ಯಾಗಕುಂಡದಿಂದ ಉದ್ಭವಿಸಿದಳು. ಋಷಿಯು ಆ ಮಗುವನ್ನು ಸ್ವೀಕರಿಸಿ, ಅರುಂಧತಿ ಎಂದು ಹೆಸರಿಟ್ಟು ಸಾಕತೊಡಗಿದ. ಅವಳಿಗೆ ಐದು ವಯಸ್ಸಾದಾಗ ಬ್ರಹ್ಮನು ಋಷಿಯ ಬಳಿಗೆ ಬಂದು, "ನಿನ್ನ ಮಗಳು ಸಕಲಾವಿದ್ಯಾ ಪಾರಂಗತಳಾಗಬೇಕು. ಅದಕ್ಕಾಗಿ ಅವಳನ್ನು ತಕ್ಕ ಗುರುವಿನ ಬಳಿಗೆ ಕಳುಹಿಸಿಕೊಡು" ಎಂದನು.

ಅರುಂಧತಿಗೆ ತಕ್ಕ ಶಿಕ್ಷಣ ನೀಡಲು ಬ್ರಹ್ಮನ ಮಡದಿ ಸಾವಿತ್ರಿಗೆ ಮಾತ್ರ ಸಾಧ್ಯ ಎಂದು ಮೇಧಾತಿಥಿಯು ಭಾವಿಸಿ ಅವಳನ್ನು ಸಾವಿತ್ರಿಯ ಬಳಿಗೆ ಕರೆದುಕೊಂಡು ಹೋದ. ಹನ್ನೆರಡು ವಿದ್ಯೆಗಳಲ್ಲಿ ಅರುಂಧತಿಯು ಏಳು ವರುಷಗಳೊಳಗೆ ಪಾರಂಗತಳಾಗಿ ವಿದ್ಯೆಗೆ ತಕ್ಕ ಸದ್ಗುಣವನ್ನು ತಿಳಿದುಕೊಂಡಳು. ಒಂದು ಸಲ ಸಾವಿತ್ರಿಯ ತನ್ನ



ಸಖಿಯಾದ ಬಹುಲೆಯೊಂದಿಗೆ ಅರುಂಧತಿಯನ್ನು ಜೊತೆಗೂಡಿಕೊಂಡು ವಿಹಾರಕ್ಕಾಗಿ ಹಿಮವತ್ಪರ್ವತದ ತಪ್ಪಲಿಗೆ ಹೋದಳು. ಮಾನಸ ಸರೋವರ ತೀರದಲ್ಲಿ ತಪೋಮಗ್ನನಾಗಿದ ತೇಜೋವಂತ ವಸಿಷ್ಠನನ್ನು ಕಂಡಳು. ಅವನನ್ನು ನೋಡಿ ಅವಳ ಹೃದಯದಲ್ಲಿ ಅನುರಾಗವುಂಟಾಯಿತು. ವಸಿಷ್ಠನೂ ಕಣ್ತೆರೆದು ಅರುಂಧತಿಯನ್ನು ಕಂಡು ಮೋಹಪರವಶನಾದ.

ಅವರಿಬ್ಬರ ಮನೋಭಿಲಾಷೆ ಸಾವಿತ್ರಿಗೆ ಅರ್ಥವಾಯಿತು. ಅವಳು ಅರುಂಧತಿಯನ್ನು ವಸಿಷ್ಠನಿಗೆ ಮದುವೆ ಮಾಡಿಕೊಡಲು ಮೇಧಾತಿಥಿಗೆ ಹೇಳಿದಳು.

ಒಂದು ಸಲ ಸಪ್ತರ್ಷಿಗಳು ಒಟ್ಟಾಗಿ ಮಹಾಯಜ್ಞವೊಂದನ್ನು ಮಾಡಿದರು. ಯಜ್ಞ ಪರಿಕರಗಳನ್ನು ಸಿದ್ಧಗೊಳಿಸಲು ಸುಂದರಿಯರಾದ ಅವರ ಪತ್ನಿಯರು ಆಚೀಚೆ ಓಡಾಡುತ್ತಿದ್ದರು. ಆಗ ಯಜ್ಞಕುಂಡದಲ್ಲಿ ಹವಿಸ್ಸು ಸ್ವೀಕರಿಸುತ್ತಿದ್ದ ಅಗ್ನಿಯು ಅವರ ಅಂದ ಚೆಂದಗಳನ್ನು ನೋಡಿ ಮರುಳಾದ. ಆದರೆ ಮಹಾಪತಿವ್ರತೆಯರಾದ ಅವರನ್ನು ಸಮೀಪಿಸಿದರೆ ಘೋರ ಶಾಪಕ್ಕೆ ಸಿಲುಕಬೇಕಾದೀತು ಎಂಬ ಭೀತಿಯಿಂದ ದೂರವಿದ್ದರೂ ಋಷಿಪತ್ನಿಯರ ನೆನವಿನಿಂದ ಅನ್ನಹಾರಗಳು ಅವನಿಗೆ ಬೇಡವಾಯಿತು. ಬಳಿಗೆ ಪತ್ನಿ ಸ್ವಾಹಾದೇವಿ ಬಂದಾಗಲೂ ಅವಳನ್ನು ನೋಡಲೊಲ್ಲ. ಇದನ್ನು ಕಂಡು ಸ್ವಾಹೆಯು ಅಗ್ನಿಯ ಅಸ್ತವ್ಯಸ್ತಸ್ಥಿತಿಗೆ ಏನು ಕಾರಣ ಎಂಬುದನ್ನು ಅರಿತುಕೊಂಡು ಅವನ ಸಂತೋಷಕ್ಕಾಗಿ ಒಂದು ಕೆಲಸ ಮಾಡಿದಳು.

ಬೇಕಾದಂತೆ ವೇಷ ಬದಲಾಯಿಸಿಕೊಳ್ಳುವ ಸಾಮರ್ಥ್ಯ ಪಡೆದಿದ್ದ ಸ್ವಾಹೆಯು ದಿನಕ್ಕೊಬ್ಬಳಂತೆ ಋಷಿ ಪತ್ನಿಯ ರೂಪ ಧರಿಸಿ ಅಗ್ನಿಯ ಬಳಿಗೆ ಬಂದು ಅವನನ್ನು ತೃಪ್ತಿಪಡಿಸಿದಳು. ಆರು ಮಂದಿ ಋಷಿ ಪತ್ನಿಯರ ರೂಪ ಸುಲಭವಾದರೂ ಏಳನೆಯವಳಾದ ಅರುಂಧತಿಯ ರೂಪ ಧರಿಸಲು ಅವಳಿಂದಾಗಲಿಲ್ಲ. ಅದಕ್ಕೆ ಕಾರಣ ಅರುಂಧತಿಯ ಪಾತಿವ್ರತ್ಯದ ಮಹಿಮೆಯೇ ಎಂಬುದು ಅವಳಿಗೆ ತಿಳಿದುದರಿಂದ ಆ ಪ್ರಯತ್ನವನ್ನು ಕೈ ಬಿಟ್ಟಳು. ಅವಳ ಈ ಕೃತ್ಯದಿಂದ ಉಳಿದ ಆರು ಮಂದಿ ಋಷಿ ಪತ್ನಿಯರ ಹೆಸರಿಗೆ ಕಳಂಕ ಬಂದಿತು. ನಭೋ ಮಂಡಲದ ಸಪ್ತರ್ಷಿ ತಾರಾಪುಂಜದಲ್ಲಿ ಇರುವ ಹಕ್ಕನ್ನು ಅವರು ಕಳೆದುಕೊಂಡರು.

ಒಮ್ಮೆ ಇಂದ್ರ ಸಭೆಯಲ್ಲಿ "ಧರ್ಮ ರಹಸ್ಯವನ್ನು ಉಪದೇಶಿಸಲು ಯಾರು ತಕ್ಕವರು?" ಎಂದು ಋಷಿಗಳೂ ದೇವತೆಗಳೂ ಚರ್ಚಿಸಿದಾಗ ಅರುಂಧತಿಗೆ ಮಾತ್ರ ಅಂತಹ ಅರ್ಹತೆಯಿದೆ ಎಂಬಂಶ ಪ್ರಕಟವಾಯಿತು. ಆದ್ದರಿಂದ ಅವರೆಲ್ಲರೂ ಅವಳ ಬಳಿಗೆ ಹೋಗಿ ಅಖಂಡವಾದ ಧರ್ಮ ಬೋಧೆಯನ್ನು ಅವಳಿಂದ ಪಡೆದು ಪುನೀತರಾದರೆಂದು ಕತೆಯಿದೆ.

ಅಂದೊಮ್ಮೆ ಭೀಕರ ಬರಗಾಲ ಲೋಕವನ್ನು ಬಾಧಿಸಿತು. ಋಷಿಗಳಿಗೆ ಎಲ್ಲೆಲ್ಲೂ ಆಹಾರ ಸಿಗಲಿಲ್ಲ. ಆಹಾರವನ್ನು ಹುಡುಕುತ್ತ ಅವರು ದೂರ ದೂರಕ್ಕೆ ತೆರಳಿದರು. ಆಶ್ರಮದಲ್ಲಿ ಅರುಂಧತಿಯೊಬ್ಬಳೇ ಇದ್ದಾಗ ಬ್ರಾಹ್ಮಣ ಅತಿಥಿಯೊಬ್ಬ ಆಶ್ರಮಕ್ಕೆ ಬಂದು, "ಅಮ್ಮಾ, ಹಸಿವು ತಾಳಲಾರೆ. ಏನಾದರೂ ಕೊಡು" ಎಂದು ಕೇಳಿದ. ಆಶ್ರಮದಲ್ಲಿ ಯಾವ ಆಹಾರ ವಸ್ತುವೂ ಇರಲಿಲ್ಲ. ಆದರೂ ಅರುಂಧತಿ ಹುಡುಕಿ ಒಣ ಹಣ್ಣೊಂದನ್ನು ತಂದುಕೊಟ್ಟಳು. ಅತಿಥಿ ಅದನ್ನು ಬೇಯಿಸಿ ಕೊಡಲು ಹೇಳಿದ. ಒಲೆಯ ಮೇಲೆ ನೀರಿರಿಸಿ ಆದರಲ್ಲಿ ಹಣ್ಣನ್ನು ಹಾಕಿ ಅರುಂಧತಿ ಉರಿ ಹಚ್ಚಿದಾಗ ಎಷ್ಟು ಹೊತ್ತಾದರೂ ಹಣ್ಣು ಬೇಯಲಿಲ್ಲ. ತಡವಾಯಿತೆಂದು ಅತಿಥಿ ಕೋಪಗೊಳ್ಳಬಾರದೆಂದು ಆಕೆ "ಹಣ್ಣು ಬೇಯಲು ಸ್ವಲ್ಪ ಹೊತ್ತು ಇದೆ. ಆ ವರೆಗೆ ಒಂದು ಕತೆಯನ್ನು ಹೇಳುತ್ತೇನೆ. ಆಗದೆ?" ಎಂದು ಪ್ರಾರ್ಥಿಸಿದಳು. ಅತಿಥಿ ಸಮ್ಮತಿಸಿದ.

ಅರುಂಧತಿ ಹನ್ನೆರಡು ವರ್ಷಗಳ ಕಾಲ ಎಡೆಬಿಡದೆ ಕತೆಯನ್ನು ಹೇಳಿದಳು. ಅತಿಥಿ ಆಲಿಸಿದ. ಹದಿಮೂರನೆಯ ವರ್ಷದಲ್ಲಿ ಋಷಿಗಳು ಧಾರಾಳವಾಗಿ ಹಣ್ಣು ಹಂಪಲುಗಳೊಂದಿಗೆ ಆಶ್ರಮಕ್ಕೆ ಹಿಂತಿರುಗಿದರು. ಅರುಂಧತಿಯು ಆದರಿಂದ ಒಳ್ಳೆಯ ಹಣ್ಣುಗಳನ್ನು ಆರಿಸಿ ಅತಿಥಿಯ ಎದುರಿಗಿಟ್ಟು ಸ್ವೀಕರಿಸಲು ಹೇಳಿದಳು. ಆಗ ನಿಜ ರೂಪದಲ್ಲಿ ಸಾಕ್ಷಾತ್ ಪರಮೇಶ್ವರನಾಗಿ ಆಕೆಗೆ ದರ್ಶನವಿತ್ತು, "ಅರುಂಧತಿ ನಿನ್ನ ಗೃಹಿಣಿ ಧರ್ಮದ ಪರೀಕ್ಷೆಗಾಗಿ ನಾನು ಬಂದಿದ್ದೆ. ಋಷಿಗಳು ಹನ್ನೆರಡು ವರ್ಷಗಳ ಘೋರ ತಪಸ್ಸಿನಿಂದ ಪಡೆಯಲಾಗದ ಪುಣ್ಯ ನಿನ್ನ ಕಥಾಲಾಪದಿಂದ ನನಗೆ ಸಿಕ್ಕಿದೆ" ಎಂದು ಹೇಳಿ ಅನುಗ್ರಹಿಸಿದ.





# ಶಿವಾಗಮಗಳು-೧

—ಡಾ|| ಬಸವರಾಜಶಾಸ್ತ್ರಿ

## I ಪ್ರಸ್ತಾವನೆ:–

ಅನಿತ್ಯಾನಿ ಶರೀರಾಣಿ ವಿಭವೋನೈವ ಶಾಶ್ವತಃ ।
ನಿತ್ಯಂಸನ್ನಿಹಿತೋಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ ॥

ಶರೀರಗಳು ಶಾಶ್ವತವಲ್ಲ, ಸಂಪತ್ತುಗಳು ಸ್ಥಿರವಲ್ಲ, ನಿತ್ಯವು ಮೃತ್ಯುವು ಸನ್ನಿಹಿತವಾಗುತ್ತಿದೆ. ಆದ್ದರಿಂದ ಮಾನವನು ಮಾಡಬೇಕಾದ ಕರ್ತವ್ಯವೆಂದರೆ. ಧಮಸಂಗ್ರಹವೇ ಆಗಿದೆ (ವಾಸವಸ್ಮೃತಿ)

ಅಹಿಂಸಾಸತ್ಯ ಮಸ್ತೇಯಂ ಬ್ರಹ್ಮಚರ್ಯಂದಯಾಕ್ಷಮಾ ।
ದಾನಂಪೂಜಾ ಜಪೋಧ್ಯಾ ನಮಿತಿ ಧರ್ಮಸ್ಯಸಂಗ್ರಹಃ ॥
ಹಿಂಸೆನಾಡದಿರುವಿಕೆ, ಸತ್ಯ, ಕಳ್ಳತನಮಾಡದಿರುವುದು, ಬ್ರಹ್ಮಚರ್ಯ' ದಯೆ, ಕ್ಷಮೆ, ದಾನ, ಪೂಜೆ, ಜಪ, ಧ್ಯಾನ–ಇವೇಧರ್ಮಸಂಗ್ರಹವೆನಿಸುವವು.

'ಧರ್ಮ' ಎಂಬ ಶಬ್ದವು 'ಧೃ' ಧಾತುವಿನಿಂದಾದುದು. ಈ ಧಾತುವಿಗೆ ಇರುವ ಅರ್ಥಗಳು ೧. ಜೀವನಧಾರಣ ಮಾಡುವಿಕೆ, ಬದುಕುವಿಕೆ, ೨. ಇರುವಿಕೆ, ೩.ಧರಿಸುವಿಕೆ, ಆಧಾರವಾಗುವಿಕೆ ೪. ಅಧಿಕಾರವನ್ನು ನಡೆಸುವಿಕೆ, ತನ್ನದನ್ನಾಗಿ ಮಾಡಿಕೊಳ್ಳುವಿಕೆ ೫. ಉಪಯೋಗಮಾಡುವಿಕೆ, ೬. ಅಭ್ಯಾಸಮಾಡುವಿಕೆ ೭. ಇಡುವಣ, ಇರುವಿಕೆ, ಎಂದು ಮೂಲಾರ್ಥದ ದೃಷ್ಟಿಯಿಂದ ಧರ್ಮ ಶಬ್ದ ಧಾತುವಿನ ಅರ್ಥವು ಮನುಷ್ಯನು ಈ ಜಗತ್ತಿನಲ್ಲಿ ಸರಿಯಾಗಿ ಬದುಕಲು, ಅಂದರೆ ತನ್ನ ಜೀವನ ಕರ್ಮವನ್ನು ಸುವ್ಯವಸ್ಥೆಯಿಂದ ನಡೆಸುವುದಕ್ಕಾಗಿ ಈ ಭೂಮಿಯ ಮೇಲೆ ಇಷ್ಟಾನುಸಾರವಾಗಿ ಇರುವುದಕ್ಕಾಗಿ, ತನ್ನ ಅಸ್ತಿತ್ವದ ರಕ್ಷಣೆಗಾಗಿ ಭರಣ, ಧಾರಣ ಪೋಷಣಗಳನ್ನು ಮಾಡಿಕೊಳ್ಳುವುದಕ್ಕಾಗಿ, ಮತ್ತು ಬಡಬಗ್ಗರಿಗೆ ಆಸರೆಕೊಡುವುದಕ್ಕಾಗಿ ಈ ಜಗತ್ತಿನಲ್ಲಿ ತನ್ನ ಅಧಿಕಾರವನ್ನು ನಡೆಸುವುದಕ್ಕಾಗಿ, ಈ ಜಗತ್ತನ್ನು ಸರಿಯಾಗಿ ಉಪಯೋಗಮಾಡಿಕೊಳ್ಳುವುದಕ್ಕಾಗಿ, ಜಗತ್ತಿನ ಸತ್ಯನಿಯಮವೇನಿರುವುದೇನೆಂಬುದನ್ನು ಅರಿತುಕೊಂಡು ಅದನ್ನು ಅಭ್ಯಾಸಿಸುವುದಕ್ಕಾಗಿಯೂ, ಯಾವ ಯಾವಉತ್ತಮ

ನಿಯಮಗಳನ್ನು ಪಾಲಿಸಬೇಕಾದ ಆವಶ್ಯಕತೆಯುಂಟೋ ಆಯಾ ನಿಯಮಗಳಿಗೆ ಧರ್ಮವೆಂದು ಹೆಸರು.

ಆದರೆ ಸಂಸ್ಕೃತದಲ್ಲಿರುವ ರೂಢಾರ್ಥಗಳು ಹೀಗಿವೆ ೧ ನಿಯಮ ೨ ಬಳಕೆಯಲ್ಲಿರುವ ನಿಯಮ ೩ ನೀತಿ, ನಿಯಮ ಕುಟಿಲ ವ್ಯವಹಾರ ೪ ಕರ್ತವ್ಯಕರ್ಮ, ಪ್ರಾಪ್ತವಾದಕರ್ಮ ೫ ನ್ಯಾಯ, ಪಕ್ಷಪಾತರಾಹಿತ್ಯ. ೬ ಸದಾಚಾರ, ಶುದ್ಧನಡತೆ, ನಿರ್ಮಲವೃತ್ತಿ ೭ ಸ್ವಭಾವ–ಶೀಲ, ಸಚ್ಚೀಲ ೮ ವಿಶೇಷ ಗುಣ ಸ್ವಾರ್ಥ ತ್ಯಾಗ. ೧೦ ಈಶ್ವರ ಭಕ್ತಿ ಎಂಬರೂಪಾರ್ಥಗಳು ಇವೆ ಎಂದು.

II ಆಗಮಪರಿಜ್ಞಾನದಲ್ಲಿ ಹೇಳಲಾಗಿದೆ. ಆದರೆ ಅಹಿಂಸೆ, ಸತ್ಯ, ಅಸ್ತೇಯ, ಬಹ್ಮಚರ್ಯ, ದಯೆ, ಕ್ಷಮೆ, ದಾನ, ಪೂಜೆ, ಜಪ ಧ್ಯಾನ, ಇವು ಧರ್ಮಸಂಗ್ರಹವೆಂದು ಹೇಳಿ ಇವುಗಳಿಗೇ ಪ್ರಧಾನತೆಯನ್ನು ಶಾಸ್ತ್ರಗಳಲ್ಲಿ ಕೊಡಲಾಗಿದೆ. ಒಟ್ಟು ಧರ್ಮಕ್ಕೆ ಇರುವ ಅರ್ಥಗಳು ೨೪ ಒಂದುದಿನಕ್ಕೆ ಇರುವ ಗಂಟೆಗಳು ೨೪ "How to line 24 hours in a day" ಎಂಬ ಇಂಗ್ಲಿಷ್ ಪುಸ್ತಕದ ಅಭಿಪ್ರಾಯವನ್ನು ವೀರಶೈವರಲ್ಲಿ ದಿನಕ್ಕೆ ಎಷ್ಟು ವೇಳೆ ಉಸಿರಾಡಿಸುವೆವೋ ಅಷ್ಟು ಪ್ರತಿದಿನ ಜಪವುಮಾಡಬೇಕೆಂಬ ಆಗಮದ ಹೇಳಿಕೆಯನ್ನು ಇಲ್ಲಿ ಹೋಲಿಸಿದರೆ ಮನುಷ್ಯ ತನ್ನ ಇಡೀ ಜೀವನದಲ್ಲಿ ಧರ್ಮದಿಂಧಲೇ ಬಾಳ ಬೇಕೆಂಬುದು ಗೊತ್ತಾಗುತ್ತದೆ. ಮತ್ತು ಅರ್ಥ, ಕಾಮ, ಮೋಕ್ಷ ಈ ಮೂರು ಧರ್ಮದ ಪ್ರಕಾರ ಪಡೆಯತಕ್ಕದ್ದು ಎಂಬ ವಿಧಿ ನಿಯಮಗಳೂಸಾರುತ್ತವೆ.

ಆಗಮ ಪರಿಜ್ಞಾನದ ಮಾತು ಇದಾಯಿತು. ಇನ್ನು ಆಗಮಸಂಗ್ರಹ, ವಿವೇಕ ಚಿಂತಾಮಣಿ ಇವುಗಳ ಮಾತು ಪರಿಶೀಲಿಸೋಣ.

ವೀರಶೈವ ಧರ್ಮ ಆಗಮಿಕ ಧರ್ಮ ಆದ್ದರಿಂದ ಈ ಧರ್ಮದಲ್ಲಿ ಶಿವಾಗಮಗಳು ಭದ್ರವಾದ ಬುನಾದಿಯಂತಿವೆ. ಆದ್ದರಿಂದಲೇ ಶ್ರೀಪತಿ ಪಂಡಿತಾರಾಧ್ಯರ॥ ಶ್ರೀ ಕ. ರ. ಭಾಷ್ಯ॥ ನೀಲಕಂಠ ಶಿವಚಾರ್ಯರ॥ ಕ್ರಿಯಾಸಾರ॥ ಶಿವಾಯೋಗಿ ಶಿವಾಚಾರ್ಯರ ॥ಸಿದ್ಧಾಂತ ಶಿಖಾಮಣಿ॥ ಲಿಂಗ ಲೀಲಾವಿಲಾಸ, ಶಿವಾನುಭವ ಸೂತ್ರ, ಶಿವಶರಣರ ವಚನಗಳೂ ಆಗಮಗಳ ಸಾರಸಂಗ್ರಹವಾಗಿವೆ. ಆಗಮ ಎಂಬ ಪದದ ಅರ್ಥವನ್ನು ಹೀಗೆ ತಿಳಿಸಲಾಗಿದೆ.

"ಆಗತಂ ಶಿವವಕ್ತ್ರೇಭ್ಯೋಗತಂಚ ಗಿರಿಜಾಶ್ರುತಾ ।
ಮತಂಚ ವಾಸುದೇವಸ್ಯ ತಸ್ಮಾದಾಗಮ ಉಚ್ಯತೇ"



ಶಿವನ ಮುಖದಿಂದ ಪಾರ್ವತಿಯು ಕೇಳಿ ವಾಸುದೇವನಾದ ವಿಷ್ಣುವು ಸರ್ವ ಸಮ್ಮತವೆಂದು ಒಪ್ಪಿಕೊಂಡ ವಿಷಯುವೆಂದು ಅರ್ಥ.

ಆಗಮಲಕ್ಷಣ:

"ಸೃಷ್ಟಿಶ್ಚ ಪ್ರಲಯಶ್ಚೈವ ದೇವಾನಾಂಚ ತಥಾರ್ಚನಂ ।
ಸಾಧನಂ ಚೈವಸರ್ವೇಷಾಂ ಪುರಶ್ಚರಣಮೇವಚ ॥
ಷಟ್ಕರ್ಮಸಾಧನಂ ಚೈವ ಧ್ಯಾನಯೋಗಶ್ಚತುರ್ವಿಧಃ ॥
ಸಪ್ತಭಿರ್ಲಕ್ಷಣೈರ್ಯುಕ್ತಂ ತ್ವಾಗಮಂತತ್ವವಿದೋವಿದುಃ ॥

ಆಗಮಕ್ಕೆ ಸೃಷ್ಟಿ, ಪ್ರಳಯ, ದೇವರಪೂಜೆ, ಸಾಧನಷಟ್ಕರ್ಮ, ಸಾಧನ, ಧ್ಯಾನ, ಯೋಗ ಈ ಏಳು ಲಕ್ಷಣಗಳಿವೆ. ಮತ್ತು ಇವುಗಳಿಗೆ ತಂತ್ರವೆಂಬ ಹೆಸರೂ ಇದೆ. (ಸುಪ್ರಭೇದಾಗಮ)

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರ ಸಮಾಶ್ರಿತಾನ್ ।
ತ್ರಾಣಂಚ ಕುರುತೇಪುಂಸಾಂ ತೇನತಂತ್ರ ಮಿತಿಸ್ಮೃತಂ ॥

ವಿಪುಲವಾದ ಅರ್ಥವನ್ನು ಕೊಡುವುದರಿಂದಲೂ, ತಂತ್ರ ಮಂತ್ರ ಸಮಾಶ್ರಿತವಾಗಿರುವುದರಿಂದಲೂ, ಮಾನವರಿಗೆ ತ್ರಾಣವನ್ನುಂಟುಮಾಡುವದರಿಂದಲೂ, ಇದಕ್ಕೆ ತಂತ್ರವೆಂದು ಹೆಸರು.

III ೨೮ ಆಗಮಗಳು ಪ್ರಕಟವಾದ ರೀತಿ :—

೧. ಕಾಮಿಕ, ೨. ಯೋಗಜ, ೩. ಚಿಂತ್ಯ, ೪. ಕಾರಣ, ೫. ಅಜಿತ ಎಂಬೈದು ಆಗಮಗಳು ಶಿವನ ಸದ್ಯೋಜಾತ ಮುಖದಿಂದಲೂ, ೬. ದೀಪ್ತ, ೭. ಸೂಕ್ಷ್ಮ, ೮. ಸಹಸ್ರ, ೯. ಅಂಶುಮತ್, ೧೦. ಸುಪ್ರಭೇದ, ಎಂಬೈದು ಆಗಮಗಳು ವಾಮದೇವ ಮುಖದಿಂದಲೂ, ೧೧ ವಿಜಯ, ೧೨. ನಿಃಶ್ವಾಸ, ೧೩. ಸ್ವಾಯಂಭುವ, ೧೪. ಅನಲ ೧೫. ವೀರ. ಎಂಬೈದು ಆಗಮಗಳು ಅಘೋರ ಮುಖದಿಂದಲೂ, ೧೬. ರೌರವ, ೧೭. ಮಕುಟ, ೧೮. ವಿಮಲ, ೧೯. ಚಂದ್ರಜ್ಞಾನ, ೨೦. ಬಿಂಬ ಎಂಬೈದು ಆಗಮಗಳು ತತ್ಪುರುಷ ಮುಖದಿಂದಲೂ, ೨೧. ಪ್ರೋದ್ಗೀತ, ೨೨. ಲಲಿತ, ೨೩. ಸಿದ್ಧ, ೨೪. ಸಂತಾನ, ೨೫. ಸರ್ವೋಕ್ತ, ೨೬. ಪಾರಮೇಶ್ವರ, ೨೭. ಕಿರಣ, ೨೮ ವಾತುಲ, ಎಂಬ ಎಂಟಾಗಮಗಳು ಈಶಾನ್ಯ ಮುಖದಿಂದಲೂ ಪ್ರಕಟವಾದವು.

IV ಶಿವಾಗಮಗಳ ಗುರು–ಶಿಷ್ಯ ಪರಂಪರೆ :—

ಶ್ರೀ ನಿಜಗುಣ ಶಿವಯೋಗಿಗಳು ವಿಶ್ವ-ವಿಷಯುಗಳನ್ನೇ ಶಂಭು ಲಿಂಗನಿಗೆ ಅರು

ಹಿದ ಮಹಾ ಜ್ಞಾನಿಗಳು. ಅವರು ತಮ್ಮ ಮೇರುಕೃತಿ, ಕನ್ನಡದ ಮೊದಲನೇ ವಿಶ್ವ ಕೋಶವೆನಿಸಿದ "ವಿವೇಕ ಚಿಂತಾಮಣಿ"ಯ ೨ನೆಯ ಪರಿಚ್ಛೇದದಲ್ಲಿ ಶಿವಾಗಮಗಳ ಬಗೆಗೆ ಕ್ರಮ ವರಿತ ವಿವೇಚನೆ ನೀಡಿರುವುದು ಮನನೀಯವಾಗಿದೆ. ಅವರು ಶಿವಾಗ ಮಗಳ ಅವತಾರದ ವಿವರವನ್ನು ಕೆಳಗಿನಂತೆ ಕೊಟ್ಟಿರುವರು: ಶಿವರುದ್ರರುಗಳಿಂದ ಆಗ ಮಗಳು ಅವತರಿಸಿದ ಕ್ರಮವಿದು;

೧ ಸದ್ಯೋಜಾತ ಮುಖದಿಂದ ಕಾಮಿಕಾಗಮವನ್ನು ಮೊದಲು ಪ್ರಣವನು, ಬಳಿಕ– ಅವನಿಂದ ತ್ರಿಕಲನು, ಆಮೇಲೆ ಅವನಿಂದ ಹರನು ಪಡೆದನು.

ಯೋಗಜಾಗಮವನ್ನು ಮೊದಲು ಸುಧಾಖ್ಯನು ಶಿವನಿಂದ ಉಪದೇಶ ಹೊಂದಿ ಆಮೇಲೆ ಬಹು, ಅವನಿಂದ ವಿಭು ಅರಿದನು.

ಚಿಂತ್ಯಾಗಮವನ್ನು ಮೊದಲು ಸುದೀಪ್ತನು, ಅವನಿಂದ ಯೋಗಾಹ್ವಯನು, ಅವನಿಂದ ಅಂಬಿ ಕೇಳಿ ತಿಳಿದನು.

ಕಾರಣಾಗಮವನ್ನು ಮೊದಲು ಕಾರಣಾಖ್ಯನು, ಬಳಿಕ ಅವನಿಂದ ಪ್ರಜಾಪತಿ ಯು ಕೇಳಿದನು.

ಅಜಿತಾಗಮವನ್ನು ಮೊದಲು ಶಿವನು, ಅವನಿಂದ ಸುಶಿವನು, ಆಮೇಲೆ ಅವ ನಿಂದ ಅಚ್ಯುತನು ಹೊಂದಿದನು.

೨. ವಾಮದೇವ ಮುಖದಿಂದ ದೀಪ್ತಾಗಮವನ್ನು ಮೊದಲು ಈಶನು, ಆಮೇಲೆ ಅವನಿಂದ ತ್ರಿಮೂರ್ತಿ, ಬಳಿಕ–ಅವನಿಂದ ಹುತಾಶನನು ಅರಿದನು.

ಸೂಕ್ಷ್ಮಾಗಮವನ್ನು ಮೊದಲುಸೂಕ್ಷ್ಮನು, ಮತ್ತೆ ಅವನಿಂದ ವೈಶ್ರವಣನು, ಬಳಿಕ ಅವನಿಂದ ಸುಪ್ರಭಂಜನನು ಹೊಂದಿದನು.

ಸಹಸ್ರಾಗಮವನ್ನು ಮೊದಲು ಕಾಲರುದ್ರನು, ಮತ್ತವನಿಂದ ಭೀಮನು, ಮತ್ತೆ ಅವನಿಂದ ಧರ್ಮನು ಅರಿದನು.

ಅಂಶುಮಾನ್ ಆಗಮವನ್ನು ಮೊದಲು ಅಂಬು, ಬಳಿಕ ಅವನಿಂದ ಉಗ್ರನು, ಆಮೇಲೆ ಅವನಿಂದ ಚೌರಸನು ಹೊಂದಿದನು.

ಸುಪ್ರಭೇದಾಗಮವನ್ನು ಮೊದಲು ಶೇಸನು, ಮತ್ತೆ ಅವನಿಂದ ವಿಘ್ನೇಶ್ವರನು ಆಮೇಲೆ ಅವನಿಂದ ಶಶಿ ತಿಳಿದನು ಹೀಗೆ ಹತ್ತು ಶಿವ ಭೇದಗಳು ಬಂದ ಬಗೆಯಿದು.

೩. ಬಳಿಕ–ಅಘೋರಮುಖದಿಂದ ವಿಜಯಾಗಮವನ್ನು ಮೊದಲು ರುದ್ರನು, ಮತ್ತೆ ಅವನಿಂದ ಅನಾದಿ, ಆಮೇಲೆ ಅವನಿಂದ ಪರಮೇಶ್ವರನು ಅರಿದನು.



ನಿಃಶಾಸಾಗಮವನ್ನು ಮೊದಲು ಉದಯನು, ಮತ್ತೆ ಅವನಿಂದ ಗಿರಿಜೆ ಕೇಳಿ ತಿಳಿದಳು.

ಸ್ವಾಯಂಭುವಾಗಮವನ್ನು ಮೊದಲು ನಿಧಿಕೇಶನು, ಬಳಿಕ ಅವನಿಂದ ಸ್ವಯಂ ಭೂ ಹೊಂದಿದನು.

ಅನಲಾಗಮವನ್ನು ಮೊದಲು ವ್ಯೋಮನು, ಮತ್ತೆ ಅವನಿಂದ ಹುತಾಶನನು ಅರಿದನು.

ವೀರಾಗಮವನ್ನು ಮೊದಲು ತೇಜಸನು, ಆಮೇಲೆ ಅವನಿಂದ ಪ್ರಜಾಪತಿ ಕೇಳಿ ತಿಳಿದನು.

ಹೀಗೆ ವಿಜಯಾದಿ ಐದು ಆಗಮಗಳ ಗುರು–ಶಿಷ್ಯ ಪರಂಪರೆಯಿದು.

೪. ಬಳಿಕ– ತತ್ಪುರುಷಮುಖದಿಂದ ರೌರವಾಗಮವನ್ನು ಬ್ರಾಹ್ಮಣೇಶನು,ಆಮೇಲೆ ಅವನಿಂದ ನಂದಿಕೇಶ್ವರನು ಅರಿದನು.

ಮಕುಟಾಗಮವನ್ನು ಮೊದಲು ಶೀಷಾಖ್ಯನು ಬಳಿಕ ಅವನಿಂದ ಮಹಾದೇವನು ಉಪದೇಶ ಪಡೆದನು.

ವಿಮಲಾಗಮವನ್ನು ಮೊದಲು ಸರ್ವಾತ್ಮಕನು, ಮತ್ತೆ ಅವನಿಂದ ವೀರಭದ್ರನು ಅರಿದನು.

ಚಂದ್ರ ಜ್ಞಾನಾಗಮವನ್ನು ಮೊದಲು ಅನಂತನು,. ಮತ್ತೆ ಅವನಿಂದ ಬೃಹಸ್ಪತಿ ಕೇಳಿದನು.

ಬಿಂಬಾಗಮವನ್ನು ಮೊದಲು ಪ್ರಶಾಂತನು, ಬಳಿಕ ಅವನಿಂದ ದಧೀಚಿಯು ತಿಳಿದನು.

ಹೀಗೆ ರೌರವಾದಿ ಐದು ಆಗಮಗಳು ಬಂದ ಕ್ರಮವಿದು.

೫. ಬಳಿಕ ಈಶಾನ್ಯ ಮುಖದಿಂದ ಪ್ರೋದ್ಗೀತಾಗಮವನ್ನು ಮೊದಲು ಶೂಲಿಯು, ಆಮೇಲೆ ಅವನಿಂದ ಕವಚಾಖ್ಯನು ಪಡೆದನು.

ಲಲಿತಾಗಮವನ್ನು ಮೊದಲು ಮಲಯನು, ಮತ್ತೆ ಅವನಿಂದ ಲಲಿತನು ಅರಿದನು.

ಸಿದ್ಧಾಗಮವನ್ನು ಮೊದಲು ಇಂದ್ರನು, ಬಳಿಕ ಅವನಿಂದ ಚಂಡೇಶನು ಉಪ ದೇಶ ಹೊಂದಿದನು.

ಶಾಂತಾ(ಸಂತಾನಾ)ಗಮವನ್ನು ಮೊದಲು ವಶಿಷ್ಠನು, ಆಮೇಲೆ ಅವನಿಂದ ಸೈಸಪಾಯನು ಅರಿದನು.

ಸರ್ವೋತ್ತಾಗಮುವನ್ನು ಮೊದಲು ಸೋಮನು, ಆಮೇಲೆ ಅವನಿಂದ ನೃಸಿಂಹನು ಉಪದೇಶ ಪಡೆದನು.

ಪಾರಮೇಶ್ವರಾಗಮುವನ್ನು ಮೊದಲು ದೇವಿ ಕೇಳಿದಳು.

ಕಿರಣಾಗಮುವನ್ನು ಮೊದಲು ದೇವಪಿತನು, ಬಳಿಕ ಅವನಿಂದ ಸಂವರ್ತಕನು ಅರಿದನು.

ವಾತುಲಾಗಮುವನ್ನು ಮೊದಲು ಶಿವರುದ್ರನು, ಮತ್ತೆ ಅವನಿಂದ ಮಹಾಕಾಳನು ಉಪದೇಶ ಹೊಂದಿದನು.

ಹೀಗೆ ಇಪ್ಪತ್ತೆಂಟು ಆಗಮಗಳು ಶಿವಮುಖದಿಂದ ಬಂದ ಗುರುಶಿಷ್ಯ ಪರಂಪರೆಯಿರುವುದು.

## V ಸಂಹಿತಾಕ್ರಮ:—

ಇವುಗಳಲ್ಲಿ ಕಾಮಿಕಾದಿ ಸುಪ್ರಭೇದಾಂತ ಹತ್ತು ಆಗಮಗಳು ಒಂದು ಸಂಗ್ರಹವಾಗಿ ಪ್ರಣವನೇ ಮೊದಲಾದ ಶಿವರಿಗೆ ಉಪದೇಶಿತವಾದ ಕಾರಣ ಇವುಗಳಿಗೆ ಶಿವಸಂಹಿತೆಗಳೆನ್ನುವರು. ವಿಜಯಾದಿ ವಾತುಲಾಂತವಾದ ಹದಿನೆಂಟು ಆಗಮಗಳು ಅನಾದಿ ರುದ್ರಮುಂತಾಗಿ ಹದಿನೆಂಟು ಜನ ರುದ್ರರಿಗೆ ಉಪದೇಶ ಹೊಂದಿರುವುದರಿಂದ ಇವುಗಳಿಗೆ ರುದ್ರಸಂಹಿತೆಯೆಂದು ಪ್ರಸಿದ್ಧಿಯಿದೆ. ವಿದ್ಯೇಶ್ವರರೇ ಶಿವಸಂಹಿತೆಯ ಉಪದೇಶಪಡೆದವರು. ಸದಾಶಿವನು ಕಾಮಿಕಾದಿ ಹತ್ತು ಸಂಹಿತೆಗಳನ್ನು ಮೊಟ್ಟ ಮೊದಲಿಗೆ ವಿದ್ಯೇಶ್ವರರಿಗೆ, ಬಳಿಕ ಪ್ರಣವಾದಿ ಶಿವಗಣರಿಗೆ ಉಪದೇಶಿಸಿದನೆಂಬುದನ್ನು ನಾವಿಲ್ಲಿ ಮರೆಯಬಾರದು.

ಈ ಶಿವಾಗಮಗಳ ಶಿವಸಂಹಿತೆಗಳ ಉಪದೇಶಕ್ರಮುವೂ ಮಹೌಘಕ್ರಮ ಮತ್ತು ಪ್ರತಿಸಂಹಿತಾಕ್ರಮವೆಂದು ಎರಡು ವಿಧವಾಗಿದೆ. ಒಂದೊಂದೇ ಸಂಹಿತೆಯನ್ನು ಬೇರೆ ಬೇರೆ ಶ್ರೋತೃಗಳು ಬಹುಸಂಖ್ಯಾತರಾದುದರಿಂದ, ಪರಿಪರಿಯಾಗಿ ವಿಸ್ತಾರ ಪೂರ್ವಕ ಬೋಧೆಯಾದುದರಿಂದ ಸಿದ್ಧಾಂತ ಶಾಸ್ತ್ರದ ಹಬ್ಬುಗೆಯೇ "ಮಹೌಘಕ್ರಮ" ವೆನಿಸುತ್ತದೆ.

ಸದಾಶಿವನು ಸೃಷ್ಟಿಯ ಅನಂತರದಲ್ಲಿ ಶುದ್ಧಾಧ್ವವಾಸಿಗಳಾದ ಪ್ರಣವಾದಿ ಹತ್ತು ಜನ ಶಿವರನ್ನು, ಅನಾದಿರುದ್ರ ಮೊದಲುಗೊಂಡು ಹದಿನೆಂಟು ರುದ್ರರನ್ನು ತನ್ನ ಅನುಗ್ರಹಕ್ಕೆ ಪಾತ್ರರನ್ನಾಗಿ ಮಾಡಿಕೊಂಡನು. ಆ ಸದಾಶಿವನ ಅನುಗ್ರಹ ಶಕ್ತಿಪಾತದಿಂದ, ಮಸ್ತಕದಲ್ಲಿಹಸ್ತಸ್ಪರ್ಶಮಾತ್ರದಿಂದ ಅವರಲ್ಲಿ ಚಿತ್‌ಕ್ರಿಯೆಗಳು ಬೆಳಗಿದವು; ನಾದರೂಪದಿಂದ ಆವಿರ್ಭವಿಸಿದ, ಜ್ಞಾನ-ಜ್ಞೇಯ-ಅನುಷ್ಠೇಯ-ಅಧಿಕಾರಿ-ಸಾಧನ-ಸಾಧ್ಯಗಳೆಂಬ



ಷಟ್‌ಪದಾರ್ಥಮಯವಾದ, ಅನೇಕ–ಛಂದಸ್ಸುಗಳ ರೂಪದಲ್ಲಿ ರಚಿತವಾದ ಕಾಮಿಕ ಮೊದಲಾದ ಒಂದೊಂದೇ ಸಂಹಿತೆಯನ್ನು ಆ ದರ್ಶಶಿವರಿಗೂ, ಅಷ್ಟಾದಶರುದ್ರರಿಗೂ ಬೇರೆ ಬೇರೆಯಾಗಿ ಬೋಧಿಸಿದಬಗೆ "ಪ್ರತಿಸಂಹಿತಾಕ್ರಮ" ವೆನಿಸುವುದು.

## VI ಆಗಮಪ್ರಭೇದಗಳು:—

ಕಾಮಿಕಾದಿ ಇಪ್ಪತ್ತೆಂಟು ಶಿವಾಗಮುಗಳು ತಮ್ಮ ಶಾಖೋಪ ಶಾಖೆಗಳಿಂದ ಅನಂತವಾಗಿರುವವು. ಅವು೨೦೭ ಭೇದಗಳಾಗಿರುವವೆಂದು ಕೆಲವರು ಹೇಳಿದರೆ ಶ್ರೀನಿಜಗುಣ ಶಿವಯೋಗಿಗಳು ೧೯೭ಪ್ರಭೇದಗಳನ್ನು ವಿವೇಕ ಚಿಂತಾಮಣಿಯಲ್ಲಿ ಪರಿಗಣಿಸಿರುವರು.

## VII ಆಗಮುಗಳಲ್ಲಿ ಪ್ರತಿಪಾದ್ಯ ವಿಷಯ:—

ಈ ಎಲ್ಲ ಶಿವಾಗಮುಗಳಲ್ಲಿ ೧ ಕ್ರಿಯಾಪಾದ ೨ ಚರ್ಯಾಪಾದ ೩ ಯೋಗಪಾದ ೪ ಜ್ಞಾನಪಾದ–ಎಂದು ನಾಲ್ಕು ಭಾಗಗಳಿವೆ. ಪತಿ, ಕುಂಡಲಿ, ಮಾಯೆ, ಪಶು, ಪಾಶ, ದೀಕ್ಷೆಯೆಂಬ ಷಟ್‌ಪದಾರ್ಥಗಳಲ್ಲದೆ ೧ ಜ್ಞಾನ ೨ ಜ್ಞೇಯ ೩ ಅನುಷ್ಠೇಯ ೪ ಅಧಿಕೃತ ೫ ಸಾಧನ ೬ ಶಿವಸಮಾನತಾರೂಪ ಮುಕ್ತಿ–ಎಂಬ ಆರು ಪದಾರ್ಥಗಳ ಪ್ರತಿಪಾದನೆ ಇವುಗಳಲ್ಲಿದೆ.

ಗುರುಮುಖದಿಂದ ಪ್ರಸಾದರೂಪದಿಂದ ಬಂದವಾಣಿಯೇ ಜ್ಞಾನ, ಪತಿ ಮೊದಲಾದ ಆರುಪದಾರ್ಥಗಳೇ ಜ್ಞೇಯ, ಲಿಂಗಾರ್ಚನೆಯೇ ಅನುಷ್ಠೇಯ. ಭಸ್ಮಧಾರಣವೇ ಅಧಿಕೃತ, ಶಿವಮಂತ್ರವೇ ಸಾಧನ, ಶಿವಸಮಾನತಾರೂಪಮುಕ್ತಿಯೇ ಸಾಧ್ಯವೆಂದು ಶ್ರೀ ನಿಜಗುಣ ಶಿವಯೋಗಿಗಳು ಸೂತ್ರರೂಪವಾಗಿ ಹೇಳುವರು.

"ಪತಿರೂಪನಾದ ಪರಶಿವನ ಭಕ್ತಿ, ಅರ್ಚನ, ವ್ರತ, ಧ್ಯಾನ, ಜ್ಞಾನವೆಂಬ ಶಿವಯೋಗದ ಐದುಸಾಧನಗಳನ್ನು ಬೋಧಿಸಿ ಆತ್ಮರಿಗೆ ಶಿವತ್ವಾಭಿವ್ಯಕ್ತಿಯೆಂಬ ಮೋಕ್ಷವನ್ನೊದಗಿಸಿ ಕೊಡತಕ್ಕ ಶಿವಾಗಮುಗಳು ಮೋಕ್ಷಾರ್ಥಿಗಳಿಗೆ ಪರಮೋಪಾದೇಯಗಳಾಗಿರುವುದರಿಂದ ಮಿಗಿಲಾದ ಪ್ರಮಾಣಗಳಾಗಿರುತ್ತವೆ. ಆದಕಾರಣ ಶಿವಶರಣರು ತಮ್ಮ ವಚನಗಳಲ್ಲಿ ಪ್ರಮಾಣಕ್ಕಾಗಿ ಆಗಮ ಶ್ಲೋಕಗಳನ್ನು ಹೇಳಿರುವರು ಇದಕ್ಕೆ ಎರಡು ಉದಾಹರಣೆ.

## VIII ಬಸವಣ್ಣನವರ ವಚನಗಳಲ್ಲಿ:—

ಶ್ರೀ ಬಸವಣ್ಣನವರು ತಮ್ಮ ಷಟ್‌ಸ್ಥಲದ ವಚನಗಳಲ್ಲಿ ಕೂಡಲಸಂಗಮನ

ಶರಣರು ಲಿಂಗಾಂಗ ಸಾಮರಸ್ಯವನರಿದವರು, ಅವರೇ ಕುಲಜರು ಎಂದು ಪ್ರಸ್ಥಾಪಿಸುವಾಗ ಶಿವಾಗಮದ ಪ್ರಮಾಣವನ್ನು ಕೊಟ್ಟಿರುವರು.

೧. ಏನನೋದಿ ಏನಕೇಳಿ, ಏನುಫಲ?
ಕುಲಜನೆಂಬುದಕ್ಕಾವುದು ದೃಷ್ಟ?

"ಸಪ್ತ ಧಾತ ಸಮಂ ಪಿಂಡಂ
ಸಪ್ತಯೋನಿ ಸಮುದ್ಭವಂ ।
ಆತ್ಮ ಜೀವ ಸಮುತ್ಪನ್ನಂ
ವರ್ಣಾನಾಂ ಕಿಂ ಪ್ರಯೋಜನಂ ॥

ಮತೊಂದು ವಚನದಲ್ಲಿ ಅದನ್ನೇ ಪುಷ್ಟೀಕರಿಸುತ್ತಾ ೨. ದೇವಾ, ನಿಮ್ಮ ಪೂಜಿಸಿ ಜೆನ್ನನ ಕುಲ ಜೆನ್ನಾಯಿಸಿತ್ತಯ್ಯಾ, ದೇವಾ, ನಿಮ್ಮ ಪೂಜಿಸಿ ದಾಸನ ಕುಲ ದೇಸೆ ವಡೆಯಿತು. ದೇವಾ, ನಿಮ್ಮಡಿ ಗೆರಗಿದ ಮಡಿ-ವಾಳಮಾಚಯ್ಯ ನಿಮ್ಮಡಿಯಾದ!

"ಶ್ವಪ ಚೋಪಿ ಮುನಿ ಶ್ರೇಷ್ಠೋ,
ಯಸ್ತು ಲಿಂಗಾರ್ಚನೇರತಃ ।
ಲಿಂಗಾರ್ಚನ ವಿಹೀನೋಽಪಿ
ಬ್ರಾಹ್ಮಣಃ ಶ್ವಪಚಾಧಮಃ" ॥

ಎಂದುದಾಗಿ ಜಾತಿ-ವಿಜಾತಿ ಯಾದರೇನು? "ಅಜಾತ ಶರಣು" ಎನ್ನದವನು, ಆತನೆ ಹೊಲೆಯ,

ಕೂಡಲ ಸಂಗಮ ದೇವಾ !





# ಶ್ರೀ ಬೆಟ್ಟಹಳ್ಳಿ ಮಠ ಮತ್ತು ಪರಂಪರೆ

—ಜಿ. ವಿ. ಶಿವಸ್ವಾಮಿ

ಧರ್ಮ ಮತ್ತು ಸಂಸ್ಕೃತಿ ಪ್ರಚಾರಕ್ಕೆ ಕಾರಣಗಳಾದ ಅನೇಕ ಮಠ ಮಾನ್ಯಗಳ ಮತ್ತು ಪರಂಪರೆಯ ಚರಿತ್ರೆಗಳು ಬೆಳಕಿಗೆ ಬರದೆ ಇರುವುದು ನಾಡಿನ ಜನತೆಯ ದುರ್ದೈವವಾಗಿದೆ. ಇದಕ್ಕೆ ಕುಣಿಗಲ್ ತಾಲ್ಲೂಕು ಹುತ್ರಿ ದುರ್ಗದ ಹೋಬಳಿ ಶ್ರೀ ಬೆಟ್ಟಹಳ್ಳಿ ಮಠದ ಚರಿತ್ರೆ ಒಂದು ನಿದರ್ಶನವಾಗಿದೆ.

ಶ್ರೀ ಬೆಟ್ಟಹಳ್ಳಿ ಮಠದ ಪರಂಪರೆಯಲ್ಲಿ ಅನೇಕ ಮಹಾಮಹಿಮರು ಮಾನವೀಯ ಅನುಕಂಪೆಯಿಂದ ಸಮಾಜಾಭಿವೃದ್ಧಿಗಾಗಿ ಹಗಲಿರುಳು ದುಡಿದು ಜನಸಾಮಾನ್ಯರನ್ನು ಉದ್ಧಾರ ಮಾಡಿರುವ ವಿಷಯ ಜನಪ್ರಿಯವಾಗಿರುತ್ತದೆ. ಆದರೆ ಈ ಮಠದ ಪರಂಪರೆಯಲ್ಲಿ ಬರುವ ಅನೇಕ ಶ್ರೀಗಳವರ ಕಾಲದೇಶಾದಿಗಳು ದೊರೆಯುವುದು ಕಷ್ಟಕರವಾಗಿರುತ್ತದೆ.

## ಬೆಟ್ಟಹಳ್ಳಿ ಮಠದ ಪರಂಪರೆಯಲ್ಲಿ ಬಂದ ಶ್ರೀಗಳವರು

1 ಶ್ರೀ ವೀರಭದ್ರ ಶಿವಾಚಾರ್ಯ ಸ್ವಾಮಿಗಳು. 2 ಶ್ರೀ ರುದ್ರಮುನಿ ಸ್ವಾಮಿಗಳು. 3 ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು. 4 ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು. 5 ಶ್ರೀ ಶಿವಾನಂದ ಸ್ವಾಮಿಗಳು. 6 ಶ್ರೀ ಪಟ್ಟದ ಚನ್ನವೀರಾಧ್ಯ ಸ್ವಾಮಿಗಳು. ಇವರೇ ಶ್ರೀ ಉರಿಲಿಂಗ ಶಿವಾಚಾರ್ಯ ಸ್ವಾಮಿಗಳು. 7 ಶ್ರೀ ಸ್ವಾಮಿ ಬಸಪ್ಪ ಒಡೆಯರು. 8 ಶ್ರೀ ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು. 9 ಶ್ರೀ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು. 10 ಶ್ರೀ ರಾಚವಟರಾಧ್ಯ ಸ್ವಾಮಿಗಳು. 11 ಶ್ರೀ ಚನ್ನವೀರ ಶಿವಾಚಾರ್ಯ ಸ್ವಾಮಿಗಳು. ಮತ್ತು 12 ಶ್ರೀ ನೀಲಕಂಠ ಶಿವಾಚಾರ್ಯ ಸ್ವಾಮಿಗಳು. (ಹಾಲಿ ಇರುವರು)

ಜ್ಞಾನ ವೃದ್ಧರಾದ ಶ್ರೀ ಚನ್ನವೀರ ಶಿವಾಚಾರ್ಯ ಸ್ವಾಮಿಯವರು ಬೆಟ್ಟಹಳ್ಳಿ ಮಠದ ಪಟ್ಟಾಧಿಕಾರ ಮಹೋತ್ಸವವನ್ನು ತಾ॥ 11-5-1951 ರಂದು ನೆರವೇರಿಸಿ ಷಟ್‌ಸ್ಥಲ ಬ್ರಹ್ಮೋಪದೇಶ ಪೂರ್ವಕವಾಗಿ ಬೆಟ್ಟಹಳ್ಳಿ ಮಠದ ಪಟ್ಟಾಧಿಕಾರವನ್ನು ಶ್ರೀ ಚನ್ನವೀರ ದೇವರಿಗೆ ವಿಧಿಪತ್ತಾಗಿ ವಹಿಸಿಕೊಟ್ಟು, ಧರ್ಮ ಸಭೆಯಲ್ಲಿ ಮಠದ ಸಂಪ್ರದಾಯದಂತೆ ಷ॥ ಬ್ರ॥ ಶ್ರೀ॥ ನೀಲಕಂಠ ಶಿವಾಚಾರ್ಯ ಸ್ವಾಮಿಗಳು ಎಂದು

ನಾಮಧೇಯವನಿಟ್ಟು ಆಶೀರ್ವದಿಸಿದರು. ಧರ್ಮ ಸಭೆಯ ಅಧ್ಯಕ್ಷತೆಯನ್ನು ಸಿದ್ಧಗಂಗಾ ಮಠಾಧೀಶ್ವರರಾದ ಶ್ರೀ ಶಿವಕುಮಾರ ಸ್ವಾಮಿಗಳು ವಹಿಸಿದ್ದರು.

ಶ್ರೀ ನೀಲಕಂಠ ಶಿವಾಚಾರ್ಯ ಸ್ವಾಮಿಗಳು ಹಿರಿಯ ಗುರುಗಳ ಮಾರ್ಗದಲ್ಲಿಯೇ ನಡೆದುಕೊಂಡು ಬಂದು ಧರ್ಮ ಮತ್ತು ಜ್ಞಾನ ಪ್ರಚಾರ ಮಾಡಲು ಕೆಲವು ಯೋಜನೆಗಳನ್ನು ಹಾಕಿಕೊಂಡರು. ಮೊದಲನೆಯದಾಗಿ ಭರತಖಂಡದ ಪುಣ್ಯಕ್ಷೇತ್ರಗಳನ್ನೂ, ಶಿಕ್ಷಣ ಕ್ಷೇತ್ರಗಳನ್ನೂ ಮತ್ತು ಅನೇಕ ಮಹಾಪುರುಷರ ಆಶ್ರಮಗಳನ್ನು ಸಂದರ್ಶನ ಮಾಡಿಬಂದರು.

ಬೆಟ್ಟಹಳ್ಳಿ ಮಠದಲ್ಲಿ ನಡೆಯುತ್ತಿದ್ದ ಜ್ಞಾನ ದಾಸೋಹದ ಜೊತೆಗೆ, ವಿದ್ಯಾಸಂಸ್ಥೆಗಳನ್ನು ತೆರೆಯಬೇಕೆಂದು ಸಂಕಲ್ಪಿಸಿದರು. ಹಿಂದಿನಿಂದಲೂ ವೀರಶೈವರುಗಳು ಜ್ಞಾನ ಪ್ರಚಾರದ ಕೇಂದ್ರಗಳಾಗಿದ್ದವು. ಆ ಸಂಪ್ರದಾಯವನ್ನು ಮುಂದುವರಿಸಲು ಶ್ರೀ ಮಠದಲ್ಲಿ 1952 ನೇ ಇಸವಿಯಲ್ಲಿ ಒಂದು ಮಾಧ್ಯಮಿಕ ಶಾಲೆ, 1964 ರಲ್ಲಿ ವೇದ ಮತ್ತು ಸಂಸ್ಕೃತ ಪಾಠಶಾಲೆಯನ್ನು ತೆರೆದರು. ಜನರ ಕೋರಿಕೆ ಹೆಚ್ಚಾಗಲು 1964 ನೇ ಜೂನ್ ತಿಂಗಳಲ್ಲಿ ಒಂದು ಪ್ರೌಢ ಶಾಲೆಯನ್ನು ತೆರೆದು ಗ್ರಾಮಾಂತರ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿದರು. ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾದ್ದರಿಂದ ಸುಮಾರು 750 ಜನ ಎಲ್ಲಾ ವರ್ಗದ ಬಡ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಲಯವನ್ನು ಮುಂದುವರಿಸಿದರು. ಆಧುನಿಕ ರೀತಿಯಲ್ಲಿ ಮಾಧ್ಯಮಿಕ ಮತ್ತು ಪ್ರೌಢಶಾಲಾ, ವಿದ್ಯಾರ್ಥಿ ನಿಲಯ, ಪ್ರಸಾದ ನಿಲಯಗಳ ಭವ್ಯ ಕಟ್ಟಡಗಳನ್ನು ನಿರ್ಮಾಣ ಮಾಡಿದರು. ಶಿವರಾತ್ರಿಯ ಜಾತ್ರಾ ಕಾರ್ಯಕ್ರಮಗಳನ್ನು ವಿಸ್ತರಿಸಿದರು. ಹುತ್ರಿ ದುರ್ಗ ಮತ್ತು ಮಠ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು. ಇಂದು ಬೆಟ್ಟಹಳ್ಳಿ ಮಠವು ಗ್ರಾಮಾಂತರ ವಿದ್ಯಾರ್ಥಿಗಳ ಶಿಕ್ಷಣ ಕೇಂದ್ರವಾಗಿ, ಕನ್ನಡ ನಾಡಿನ ಪುಣ್ಯ ಕ್ಷೇತ್ರವೆಂದು ಹೆಸರು ಪಡೆದಿರುತ್ತದೆ. ಹೀಗೆ ಕರ್ನಾಟಕದಲ್ಲಿ ಅನೇಕ ಮಠಗಳು ಧರ್ಮ ಮತ್ತು ಶಿಕ್ಷಣ ಪ್ರಚಾರ ಮಾಡುವ ಪವಿತ್ರ ಕ್ಷೇತ್ರಗಳಾಗಿ ಜನತೆಯ ಜ್ಞಾನವಾಹಿನಿಗಳಾಗಿರುತ್ತವೆ.

ಎನಗಿಂತ ಕಿರಿಯರಿಲ್ಲ
ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮಪಾದ ಸಾಕ್ಷಿಎನ್ನಮನಸಾಕ್ಷಿ
ಕೂಡಲಸಂಗಮ ದೇವ.



# ಗ್ರಾಮ ಕೈಗಾರಿಕೆಗಳು ಮತ್ತು ಆರ್ಥಿಕ ಅಭಿವೃದ್ಧಿ–

—ಡಿ. ವೆಂಕಟರಾವ್ ಎಂ. ಎ.
ಹಾಸನ

ಭಾರತ ಹಳ್ಳಿಗಳಲ್ಲಿ ಜೀವಿಸುತ್ತಿದೆ. ಹಳ್ಳಿಗಳ ಉದ್ಧಾರವಾಗವೆ ಭಾರತದ ಉದ್ಧಾರವಾಗದು.” ಎಂಬ ನುಡಿ ಇಂದು ಅತಿಯಾದ ಬಳಕೆಯಿಂದಾಗಿ ಮೌಲ್ಯವನ್ನು ಕಳೆದು ಕೊಂಡಿದೆ. ಹಳ್ಳಿಗಳು ಆರ್ಥಿಕವಾಗಿ ಸುಧಾರಿಸಿವೆಯೇ ಎಂದು ಪ್ರಶ್ನಿಸಿ ಕೊಂಡಾಗ ಮಾತ್ರ ದೊರೆಯುವುದು ತೀರಾ ಅತೃಪ್ತಿಕರ ಉತ್ತರ. ಇಂದಿಗೂ ಬಹುಪಾಲು ಹಳ್ಳಿಗಳು ಗುರುತಿಸಲಾರದಷ್ಟು ದುಸ್ಥಿತಿಯಲ್ಲಿವೆ. ಗ್ರಾಮ ಜೀವನದಲ್ಲಿ ನಿರುದ್ಯೋಗ, ನಿರುತ್ಸಾಹ, ಔದಾಸೀನ್ಯಗಳು ಹೆಚ್ಚುತ್ತಿವೆ. “ಬದುಕು ಇನ್ನು ಇಷ್ಟೇ, ದೇವರು ಮಾಡಿದಂತಾಗಲಿ” ಎಂಬ ಹತಾಶೆಯ ನುಡಿಗಳು ಕೇಳಿ ಬರುತ್ತಿವೆ. ಹಳ್ಳಿಗಳು ಪುರಾತನ ಸಂಪ್ರದಾಯಗಳ ತವರುಮನೆ, ಹಿಂದೂ ಸಂಸ್ಕೃತಿಯ ಸಂಕೇತಗಳು. ದೇಶದ ಆರ್ಥಿಕ ಅಭಿವೃದ್ಧಿಗೆ ಭದ್ರ ಬುನಾದಿ ಹಾಕಬಲ್ಲ ಶಕ್ತಿ–ಸಾಮರ್ಥ್ಯಗಳನ್ನು ಅವು ಹೊಂದಿವೆ. ಆದರೆ ಈ ಗುರಿ ಸಾಧನೆಗೆ ಮೊದಲು ಅವು ಆರ್ಥಿಕವಾಗಿ ಭದ್ರತೆಯ ಗೋಡೆ ಹಾಕಿ ಕೊಳ್ಳಬೇಕಾದುದು ಅಗತ್ಯ. ಕೃಷಿಗೆ ಎರಡನೆಯದಾಗಿರುವ, ಪ್ರಾಚೀನ ಕಾಲದಿಂದಲೂ ಉಳಿದು ಕೊಂಡು ಬಂದಿರುವ ಗ್ರಾಮ ಕೈಗಾರಿಕೆಗಳಿಗೆ ಉತ್ತೇಜನ ಕೊಟ್ಟಲ್ಲಿ ಮಾತ್ರ ಹಳ್ಳಿಗಳು ಆರ್ಥಿಕವಾಗಿ ಸಮರ್ಥವಾಗಬಲ್ಲವು. ಭಾರತದ ಹಳ್ಳಿಗಳ ಆರ್ಥಿಕ ಜೀವನವನ್ನು ಉತ್ತಮ ಪಡಿಸಲು ಗ್ರಾಮ ಕೈಗಾರಿಕಾಭಿವೃದ್ಧಿಯೇ ರಾಮ ಬಾಣ ಎಂದು ಗಾಂಧೀಜಿ ಹೇಳಿದರು. “ಗ್ರಾಮ ಕೈಗಾರಿಕೆಗಳಲ್ಲಿ ನಿರತರಾಗಿ ಬಹುಸಂಖ್ಯಾತರ ಉತ್ಪಾದಕತೆ, ವರಮಾನ ಮತ್ತು ಜೀವನ ಮಟ್ಟವನ್ನು ಸುಧಾರಿಸುವ ಪ್ರತಿಯೊಂದು ಪ್ರಯತ್ನವೂ ಸ್ವಾಗತಾರ್ಹ. ಇದರಿಂದ ದೇಶಕ್ಕೆ ದೊರೆಯುವ ಪ್ರಯೋಜನ ಅಳತೆಗೆ ನಿಲುಕದಂತಹುದು” ಎಂದು 1955ರಲ್ಲಿ ಕಾರ್ವೆ ಸಮಿತಿ ಸಲಹೆ ಮಾಡಿತು. ಈ ಕಾರಣದಿಂದಲೇ ಭಾರತ ಸರಕಾರ ಯೋಜನಾವಧಿಯಲ್ಲಿ ಗ್ರಾಮ ಕೈಗಾರಿಕೆಗಳ ಬೆಳವಣಿಗೆಗೆ ಹೆಚ್ಚಿನ ಗಮನ ನೀಡುತ್ತಿದೆ.

“ಗ್ರಾಮ ಕೈಗಾರಿಕೆ” ಎಂದರೆ ಕೆಲಸಗಾರರು ತಮ್ಮ ನೆರೆ ಹೊರೆಯವರ ಉಪಯೋಗಕ್ಕೆ ಪದಾರ್ಥಗಳನ್ನು ಮಾಡುವ ವೃತ್ತಿ. ಗ್ರಾಮ ಜೀವನದ ಮೇಲೆ ಪ್ರಭಾವ ಬೀರುವ ಕೈಗಾರಿಕೆ ಎಂಬುದು ಇದರ ವಿಶಾಲವಾದ ಅರ್ಥ. ಭಾರತದ ಗ್ರಾಮ ಕೈಗಾರಿಕೆಗಳಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ ಒಂದು, ಕೃಷಿಯ ಜೊತೆಯಲ್ಲೇ

ಗ್ರಾಮ ಕೈಗಾರಿಕೆಗಳನ್ನು ಉಪವೃತ್ತಿಯಾಗಿ ಅವಲಂಬಿಸಿ, ಹೆಚ್ಚಿನ ಆದಾಯಗಳಿಸುವುದು. ಎರಡು: ಕೃಷಿಯ ನೆರವಿಲ್ಲದೆಯೇ ಸ್ವತಂತ್ರವಾಗಿ ಮನೆಯಲ್ಲಿಯೇ ಪದಾರ್ಥಗಳನ್ನು ತಯಾರಿಸಿ, ಅವುಗಳ ಮಾರಾಟದಿಂದ ಬಂದ ಹಣದಲ್ಲಿ ಜೀವನ ನಡೆಸುವುದು. ಈ ಕೈಗಾರಿಕೆಗಳಲ್ಲಿ ಕೆಲಸ ಮಾಡುವವರಿಗೆ ಕಾಲ, ಸ್ಥಳ ನಿರ್ದೇಶನ ಇವುಗಳ ನಿರ್ಬಂಧವಿಲ್ಲ. ಸಾಮಾನ್ಯವಾಗಿ ಮನೆಗೆ ಸೇರಿದವರೇ ಅಲ್ಲಿಯ ಕೆಲಸಗಾರರು. ಮನೆಗಳೇ ಕೈಗಾರಿಕಾ ಕಾರ್ಖಾನೆ. ಇಂದು ಅಸಂಖ್ಯಾತ ಗ್ರಾಮ ಕೈಗಾರಿಕೆಗಳು ಭಾರತದ ನೆಲದಲ್ಲಿ ಬೇರೂರಿವೆ. ಅವುಗಳಲ್ಲಿ ಮುಖ್ಯವಾದವು ಹಿತ್ತಾಳೆಯ, ತಾಮ್ರದ ಕೆಲಸ, ಜೇನು ಸಾಕಾಣಿಕೆ, ಬೆಲ್ಲ ತಯಾರಿಕೆ, ರೇಷ್ಮೆ ಕೈಗಾರಿಕೆ, ಕೈಯಿಂದ ಕಾಗದದ ತಯಾರಿ, ಕೈಮಗ್ಗದ ಕೈಗಾರಿಕೆ, ಖಾದಿ ಕೈಗಾರಿಕೆ, ಹಗ್ಗದ ಕೈಗಾರಿಕೆ ಇತ್ಯಾದಿ. ಗ್ರಾಮ ಕೈಗಾರಿಕೆಗಳ ಗುಂಪಿಗೆ ಸೇರಿರುವ ಇತರ ಕೈಗಾರಿಕೆಗಳೆಂದರೆ ಬೆಲ್ಲ, ಖಂಡಸಾರಿ, ಬೆಂಕಿಪೆಟ್ಟಿಗೆ, ಸಾಬೂನು, ಮಡಿಕೆಗಳು, ವನಸ್ಪತಿ ಎಣ್ಣೆ ಮುಂತಾದವು. ನಮ್ಮ ದೈನಂದಿನ ಬೇಡಿಕೆಗಳನ್ನು ಪೂರೈಸುವ ಇವು ಮಾನವ ಶಕ್ತಿಯ ಬಳಕೆಗೆ ವಿಶಿಷ್ಟ ಅವಕಾಶವನ್ನೊದಗಿಸುತ್ತವೆ.

### ನಿರುದ್ಯೋಗ ನಿವಾರಣೆ:

ಕೃಷಿ ಪ್ರಧಾನವಾದ ಭಾರತದಲ್ಲಿ ಇಂದು ಗ್ರಾಮ ಕೈಗಾರಿಕೆಗಳು ಅತ್ಯಾವಶ್ಯಕ. ನಿರುದ್ಯೋಗ ಸಮಸ್ಯೆಯ ನಿವಾರಣೆಗೆ ಏಕೈಕ ಮಾರ್ಗವೆಂದರೆ ಗ್ರಾಮೀಣ ಉತ್ಪಾದನೆಗಳ ಬಳಕೆ. ಕೃಷಿಯ ಮೇಲಿನ ಒತ್ತಡ ಹೆಚ್ಚಿದಂತೆಲ್ಲಾ ಅಧಿಕ ಜನರಿಗೆ ಉದ್ಯೋಗ ಒದಗಿಸಬೇಕಾದರೆ ಗ್ರಾಮ ಕೈಗಾರಿಕೆಗಳು ಬೇಕು. ರೈತರ ಆರ್ಥಿಕ ಸ್ಥಿತಿ ಸುಧಾರಿಸಬೇಕಾದರೆ ಅವರಿಗೆ ಯಾವುದಾದರೂ ಉಪವೃತ್ತಿ ಇದ್ದೇ ತೀರಬೇಕು. ದೇಶದಲ್ಲಿರುವ ಎಲ್ಲರಿಗೂ ಉದ್ಯೋಗ ದೊರಕಿಸಿಕೊಡುವ ಮಟ್ಟಿಗೆ ಬೃಹತ್ ಕೈಗಾರಿಕೆಗಳು ಬೆಳೆಯಬೇಕಾದರೆ ಅವಕ್ಕೆ ಅಗಾಧ ಬಂಡವಾಳ ಬೇಕು. ಬಂಡವಾಳ ನಮ್ಮಲ್ಲಿ ಸಾಕಷ್ಟಿಲ್ಲ. ಪರಿಸ್ಥಿತಿ ಹೀಗಿರುವಾಗ ಶ್ರಮ ಪ್ರಧಾನವಾದ, ಕಡಿಮೆ ಬಂಡವಾಳದಿಂದ ನಡೆಯುವ ಗ್ರಾಮ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದು ಅನಿವಾರ್ಯ. ಇದರಿಂದ ಉತ್ಪಾದನೆ ಹಾಗೂ ಉದ್ಯೋಗ ಎರಡೂ ಸಾಧ್ಯ. ಬಡತನವೆಂಬ ವಿಷ ಚಕ್ರಕ್ಕೆ ಕತ್ತರಿ ಹಾಕಲು ಇದು ಸುಲಭ ಉಪಾಯ. ಹೆಚ್ಚುತ್ತಿರುವ ಜನಶಕ್ತಿಯನ್ನು ಗ್ರಾಮ ಕೈಗಾರಿಕೆಗಳ ಮೂಲಕ ಸದುಪಯೋಗ ಪಡಿಸಿಕೊಂಡಲ್ಲಿ ನಿರುದ್ಯೋಗ ಸಮಸ್ಯೆ ತಂತಾನೆ ಮಾಯವಾಗುತ್ತದೆ. ಗಾಂಧೀಜಿಯವರ ಪ್ರಕಾರ "ಜನಶಕ್ತಿ ಇಲ್ಲದ ಕಡೆ ಯಂತ್ರಗಳ ಶಕ್ತಿ ಇರಬೇಕು. ಜನಶಕ್ತಿ ಹೆಚ್ಚಾಗಿರುವ ಕಡೆ ಯಾಂತ್ರೀಕೃತ ಕೈಗಾರಿಕೆ ಜನಶಕ್ತಿಗೆ ಶಾಪವಿದ್ದಂತೆ." ಗ್ರಾಮಗಳ ಜೀವನಕ್ಕೆ ಹೊಸ ತಿರುವು ನೀಡಿ, ಅವುಗಳ ಭದ್ರ ಭವಿಷ್ಯಕ್ಕೆ ಪೂರಕವಾಗಬಲ್ಲ, ಅವುಗಳನ್ನು ಸುಖ ಸೌಭಾಗ್ಯಗಳಿಂದ ತುಂಬಿ ತುಳುಕಿಸಬಲ್ಲ ಸಾಮರ್ಥ್ಯವನ್ನು ಗ್ರಾಮ ಕೈಗಾರಿಕೆಗಳು ಮಾತ್ರ ಹೊಂದಿವೆ.



### ಜನ ಶಕ್ತಿಯ ವೃಥಾ ವ್ಯಯ:

ಭಾರತದಲ್ಲಿ ರೈತರು ಸರಿಯಾದ ಉಪವೃತ್ತಿಗಳನ್ನು ಅನುಸರಿಸದೆ ವಿರಾಮ ಕಾಲವನ್ನು ವ್ಯರ್ಥ ರೀತಿಯಲ್ಲಿ ಕಳೆಯುತ್ತಾರೆ. ಇದರಿಂದ ಅವರ ಆರ್ಥಿಕ ಜೀವನ ದುಸ್ಥಿತಿಗೆ ಈಡಾಗಿರುವುದಲ್ಲದೆ ದೇಶಕ್ಕೆ ಅಪಾರ ನಷ್ಟವಾಗುತ್ತದೆ. ಈ ಬಗೆಯ ಜನಶಕ್ತಿಯ ವೃಥಾ ವ್ಯಯ ದೇಶದ ಭದ್ರ ಭವಿಷ್ಯಕ್ಕೆ ಆತಂಕಕಾರಿ. ಆದ್ದರಿಂದ ಕೃಷಿ ಉತ್ಪಾದನೆಗೆ ಅನ್ವಯವಾಗುವಂತೆ, ರೈತರ ವಿರಾಮಕಾಲದ ಸದುಪಯೋಗವಾಗುವಂತೆ ಗ್ರಾಮ ಕೈಗಾರಿಕೆಗಳನ್ನು ಸ್ಥಾಪಿಸಬೇಕು. ಭಾರತೀಯ ರೈತರಿಗೆ ತಗಲಿರುವುದು ಹಣದ ಬರವಲ್ಲ; ಕೆಲಸದ ಬರ. ಗ್ರಾಮ ಕೈಗಾರಿಕೆಗಳ ಮೂಲಕ ರೈತರಿಗೆ ಕೆಲಸ ಒದಗಿಸಿದಲ್ಲಿ, ಭಾರತದ ಆರ್ಥಿಕ ನೀತಿ ಗ್ರಾಮ ಕೈಗಾರಿಕೆಗಳನ್ನು ಪ್ರಧಾನವಾಗಿ ಪರಿಗಣಿಸಿದಲ್ಲಿ ಬಡತನ ನೀಗಲು ಸಾಧ್ಯ.

### ಅಸಮರ್ಪಕ ಕ್ಷೇತ್ರ:

ಬಂಡವಾಳದ ಹಿತಮಿತ ಬಳಕೆ, ಕಾರ್ಮಿಕರ ಪರಿಮಿತ ಸಂಖ್ಯೆ, ಹಿಡಿತಕ್ಕೆ ಸಿಕ್ಕುವ ಮಟ್ಟಿಗಿನ ಗಾತ್ರ, ಮಾರುಕಟ್ಟೆಯ ಸೌಲಭ್ಯ, ಇತ್ಯಾದಿ ಅಂಶಗಳಿಂದಾಗಿ ಗ್ರಾಮ ಕೈಗಾರಿಕೆಗಳು ದೇಶದ ಅರ್ಥ ವ್ಯವಸ್ಥೆಯಲ್ಲಿ ಹಿರಿಯ ವ್ಯಕ್ತಿತ್ವ ಪಡೆದಿವೆ. ಆದರೆ ದುರದೃಷ್ಟ ಸಂಗತಿಯೆಂದರೆ ಅವುಗಳ ಕ್ಷೇತ್ರ ಅಸಮರ್ಪಕವಾಗಿರುವುದು. ಹಿಂದೆ ಅಂತರರಾಷ್ಟ್ರೀಯ ಮನ್ನಣೆ ಪಡೆದು ಮಕುಟಪ್ರಾಯವಾಗಿದ್ದ ಹಲವು ಗ್ರಾಮ ಕೈಗಾರಿಕೆಗಳು ಇಂದು ಇಲ್ಲವಾಗಿವೆ. ಇನ್ನು ಕೆಲವು ನಶಿಸಿ ಹೋಗುವ ಸ್ಥಿತಿಯಲ್ಲಿದ್ದು ಮತ್ತೆ ಕೆಲವು ಕಷ್ಟದಿಂದ ಕಾಲ ತಳ್ಳುತ್ತಿವೆ. ಮೂಲ ವಸ್ತುಗಳು ದೊರೆಯದಿರುವುದು, ಪದಾರ್ಥಗಳನ್ನು ಮಾಡುವ ಚಾಕಚಕ್ಯತೆ ಕುಂದುತ್ತಿರುವುದು, ವ್ಯಾಪಾರದ ಅಸೌಕರ್ಯ, ದೊಡ್ಡ ಕೈಗಾರಿಕೆಗಳ ಪೈಪೋಟಿ, ಉತ್ಪಾದನಾ ವಿಧಾನಗಳ ನ್ಯೂನತೆ, ಹಣಕಾಸಿನ ಕೊರತೆ, ತೆರಿಗೆಯ ಹೊರೆ, ಅಜ್ಞಾನ, ವೈಯಕ್ತಿಕ ದುರಭ್ಯಾಸಗಳು, ಮಾರುಕಟ್ಟೆಯ ಕೊರತೆ ಇತ್ಯಾದಿ ತೊಡಕುಗಳನ್ನು ಗ್ರಾಮ ಕೈಗಾರಿಕೆಗಳು ಎದುರಿಸಬೇಕಾಗಿದೆ. ಕೆಲಸಗಾರರು ಎಷ್ಟು ದುಡಿದರೂ ಅವರ ಹೊಟ್ಟೆ ತುಂಬುತ್ತಿಲ್ಲ. ಸ್ವಯಂ ಸಾಹಸಕ್ಕೆ ಪ್ರೋತ್ಸಾಹ ಇಲ್ಲದಿರುವುದರಿಂದ, ಪ್ರಾಮಾಣಿಕತೆ, ದಕ್ಷತೆಗಳಿಗೆ ಬೆಲೆ ಇಲ್ಲದಿರುವುದರಿಂದ ಪ್ರತಿಭಾವಂತರು ಈ ಬಗೆಯ ಕೈಗಾರಿಕೆಗಳಲ್ಲಿ ಬಂಡವಾಳ ಹೂಡಲು ಹಿಂಜರಿಯುತ್ತಿದ್ದಾರೆ. ಇಂದಿನ ಅರ್ಥ ವ್ಯವಸ್ಥೆಯಲ್ಲಿ ಬೃಹತ್ ಕೈಗಾರಿಕೆಯೊಂದರ ಶಿಶುವಾಗಿರುವ ಗ್ರಾಮ ಕೈಗಾರಿಕೆಗೆ ಉತ್ತೇಜನ ದುರ್ಲಭವಾಗಿದೆ.

ನಮ್ಮ ದೇಶದಲ್ಲಿ ಬೇಕಾದಷ್ಟು ಪ್ರಕೃತಿ ಆಸರೆ ಇದೆ. ಕಸುಬುದಾರರಲ್ಲಿ ಆಸಕ್ತಿ ಉತ್ಸಾಹಗಳಿವೆ. ವಂಶಾನುಗತವಾಗಿ ಬಂದಿರುವ ಅನುಭವ ಇದೆ. ಕಸುಬುದಾರರಿಗೆ ಮನಸ್ಸು ನಾಟುವಂತೆ ಹೇಳಿಕೊಟ್ಟರೆ ಅವರು ಹೊಸ ರೀತಿಯ ಅನುಸರಣೆಗೆ ಹಿಂಜರಿ

ಯಲಾರರು. ಕಸುಬುದಾರರು ಈಗ ಮರದ ಗಾಣಕ್ಕೆ ಬದಲಾಗಿ ಕಬ್ಬಿಣದ ಗಾಣವನ್ನು ಬಳಸುತ್ತಿದ್ದಾರೆ. ಕಮ್ಮಾರರು, ಬಡಗಿಗಳು, ಅಕ್ಕಸಾಲಿಗರು ತಮ್ಮ ಕಸುಬಿನಲ್ಲಿ ಹೊಸರೀತಿಯ ಉಪಕರಣಗಳನ್ನು ಬಳಸುತ್ತಿದ್ದಾರೆ. ಹೊಸ ವಿಧಾನಗಳನ್ನು ಅವರು ವಿರೋಧಿಸುವುದಿಲ್ಲ ಎನ್ನುವುದಕ್ಕೆ ಇದು ನಿದರ್ಶನ. ಕಸುಬುದಾರ್ರರು ಪಟ್ಟಣಕ್ಕೆ ಹೋಗುವುದೂ ನಿರ್ಬಂಧದಿಂದಾಗಿಯೇ ಹೊರತು ಸ್ವತಃ ಆಸೆಯಿಂದಲ್ಲ. ಪಟ್ಟಣದ ಕಾರ್ಖಾನೆಯ ಜೀವನ ಹಳ್ಳಿಯ ಕಸುಬುದಾರರಿಗೆ ಹಿಡಿಸುವುದಿಲ್ಲ. ಜನಸಂದಣಿಯ ಹೊಲಸು ಬಾಳು ಅವರ ಮನಸ್ಸಿಗೆ ಒಗ್ಗುವುದಿಲ್ಲ. ಕಾರ್ಖಾನೆಯ ಯಂತ್ರ ಜೀವನ, ಕಷ್ಟದ ಕೆಲಸ, ಕಠಿಣ ಶಿಸ್ತು ಇವು ಅವರನ್ನು ಆಕರ್ಷಿಸುವುದಿಲ್ಲ. ಕಸುಬುದಾರರಿಗೆ ಅವರ ಕೆಲಸದಲ್ಲಿ ಅಭಿಮಾನವೂ ಸಂಶೋಧನಾ ಭಾವನೆಯೂ ಹೆಚ್ಚಬೇಕಾದರೆ ಅವರು ತಮ್ಮ ಪ್ರಿಯ ಬಂಧು ಜನಗಳ ಮಧ್ಯದಲ್ಲಿ ದುಡಿಯಬೇಕು ಎನ್ನುವುದು ಹಲವರ ಅಭಿಪ್ರಾಯ. ಈ ಅಭಿಪ್ರಾಯ ಸತ್ಯವಿಲ್ಲದಿಲ್ಲ. ಆದ್ದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಕಸುಬುದಾರರಿಗೆ ಎಲ್ಲಾ ಬಗೆಯ ಸೌಕರ್ಯಗಳನ್ನೂ ಒದಗಿಸಿ, ಅವರು ಸಂತೋಷ ಚಿತ್ತರಾಗಿ ದುಡಿಯುವಂತೆ ಮಾಡಬೇಕು. ಆಗ ಗ್ರಾಮ ಕೈಗಾರಿಕೆಗಳ ಕಸುಬುದಾರರು ಎಷ್ಟು ಸೊಗಸಾದ ವಸ್ತುಗಳನ್ನು ಸೃಷ್ಟಿ ಮಾಡುವ ಶಕ್ತಿ ಪಡೆದಿದ್ದಾರೆಂಬುದು ತಿಳಿಯುತ್ತದೆ.

### ಸರಕಾರದ ಕ್ರಮಗಳು :

ಗ್ರಾಮ ಕೈಗಾರಿಕೆಗಳನ್ನು ವೃದ್ಧಿಪಡಿಸಿ, ಆರ್ಥಿಕವಾಗಿ ಅವುಗಳಿಗೆ ಉತ್ತಮ ಸ್ಥಾನ ದೊರಕಿಸಿಕೊಡಲು ಸರಕಾರ ಹಲವು ಕ್ರಮಗಳನ್ನು ಕೈಗೊಂಡಿದೆ. ಗೃಹ ಕೈಗಾರಿಕೆಗಳ ಮಂಡಲಿ, ಅಖಿಲ ಭಾರತ ಖಾದಿ ಮತ್ತು ಗ್ರಾಮೋದ್ಯೋಗ ಮಂಡಲಿ, ರೇಷ್ಮೆ ಮಂಡಲಿ, ನಾರು ಮಂಡಲಿ, ಅಖಿಲ ಭಾರತ ಕೈಮಗ್ಗ ಮಂಡಲಿ, ಕಾಫಿ ಮಂಡಲಿ, ಇತ್ಯಾದಿ ಸಮಿತಿಗಳನ್ನು ಸ್ಥಾಪಿಸಲಾಗಿದೆ. ಇವುಗಳಿಗೆ ಹೆಚ್ಚಿನ ಅಧಿಕಾರವನ್ನು ನೀಡಿದ್ದು, ಅವುಗಳ ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸಲಾಗಿದೆ. ಹಣಕಾಸಿನ ಕೊರತೆಯನ್ನು ತುಂಬಲು ಸ್ಟೇಟ್ ಬ್ಯಾಂಕ್, ವಾಣಿಜ್ಯ ಬ್ಯಾಂಕುಗಳು ಶ್ರಮಿಸುತ್ತಿವೆ. ರಿಜರ್ವ್ ಬ್ಯಾಂಕು ಕೈಗಾರಿಕಾ ಅಭಿವೃದ್ಧಿ ಬ್ಯಾಂಕನ್ನು ಸ್ಥಾಪಿಸಿ, ಈ ಮೂಲಕ ಕುಶಲ ಕರ್ಮಿಗಳಿಗೆ ನೆರವಾಗುತ್ತಿದೆ. ಕಡಿಮೆ ಮಟ್ಟದ ನೈಪುಣ್ಯತೆ ಮತ್ತು ತಾಂತ್ರಿಕ ಜ್ಞಾನದ ಅಭಾವದ ನಿವಾರಣೆಗೆ ಬೇಕಾಗಿರುವ ತಾಂತ್ರಿಕ ನೆರವನ್ನು ಪೂರೈಸಲು ಸರಕಾರ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿದೆ. ಕಸುಬುದಾರರಿಗೆ ಯೋಗ್ಯ ತ ಬೇತಿ ನೀಡುವ ಉದ್ದೇಶದಿಂದ ಹಲವಾರು ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದೆ. ಚಲಿಸುವ ವಾಹನದ ಮೂಲಕ ತರಬೇತಿ ನೀಡುವ ವ್ಯವಸ್ಥೆಯನ್ನೂ ಕೈಗೊಳ್ಳಲಾಗಿದೆ. ಇದರ ಜೊತೆಗೆ ಜನರಲ್ಲಿ ತಿಳುವಳಿಕೆ ಉಂಟುಮಾಡಲು, ಪದಾರ್ಥಗಳ ಮಾರಾಟಕ್ಕೆ ಅವಕಾಶ



ಕಲ್ಪಿಸಲು, ಕಸುಬುದಾರರನ್ನು ಪ್ರೇರೇಪಿಸಲು ಅಲ್ಲಲ್ಲಿ ಪ್ರದರ್ಶನಗಳನ್ನು ಏರ್ಪಡಿಸಲಾಗುತ್ತಿದೆ. ಇಂತಹ ಕ್ರಮಗಳು ಗ್ರಾಮ ಕೈಗಾರಿಕೋನ್ನತಿಗೆ ಮುಖ್ಯ ಸಾಧಕಗಳಾಗಿದ್ದು, ಗ್ರಾಮ ಕೈಗಾರಿಕೆಗಳನ್ನು ಜೀವಂತಗೊಳಿಸುವಲ್ಲಿ ಫಲಕಾರಿಯಾಗುತ್ತಿವೆ.

ಕೋಟ್ಯಂತರ ಬಡಜನರ ಬದುಕಿನ ಜೀವನಾಡಿಯಾಗಿರುವ ಗ್ರಾಮ ಕೈಗಾರಿಕೆಗಳು ಅಭಿವೃದ್ಧಿ ಹೊಂದಿದಲ್ಲಿ ಮಾತ್ರ ದೇಶದ ಆರ್ಥಿಕ ಅಭಿವೃದ್ಧಿ ತ್ವರಿತ ಗತಿಯಲ್ಲಿ ಸಾಗಲು ಸಾಧ್ಯ. ಈ ಕೈಗಾರಿಕೆಗಳು ನಮ್ಮನ್ನು ಸಾಮಾಜಿಕ ನ್ಯಾಯದ ಕಡೆಗೆ ಕೊಂಡೊಯ್ಯುತ್ತವೆ. ಆದಾಯದ ಹಂಚಿಕೆಯಲ್ಲಿ ಸಮತೆಯನ್ನೂ ತರುತ್ತವೆ. ಜೀವನದ ದುಃಖವನ್ನು ತೊಡೆದು ಹಾಕುತ್ತವೆ. ಬಡತನವನ್ನು ನೀಗಿಸುತ್ತವೆ. ಸಂಸ್ಕೃತಿಯನ್ನು ಬೆಳಸುತ್ತವೆ. ನಿರ್ಮಾಣ ಶಕ್ತಿಯನ್ನು ವೃದ್ಧಿಪಡಿಸುತ್ತವೆ. ಅನೇಕ ಮುಖವಾದ ಜೀವನ ಸೌಕರ್ಯಗಳನ್ನು ಕಲ್ಪಿಸುತ್ತವೆ. ಈ ಕೈಗಾರಿಕೆಗಳಿಂದ ಸಂತ್ರಸ್ತಪ್ರಜೆ ಸ್ವಾವಲಂಬಿಯಾಗಲು ಸಾಧ್ಯ. ನಿರುದ್ಯೋಗಿಗಳು ಪರೋಪಜೀವಿ ವರ್ಗಕ್ಕೆ ಸೇರದೆ ಸ್ವತಃ ಉತ್ಪಾದಕರಾಗುವುದು ಇದೊಂದೇ ಮಾರ್ಗದಿಂದ. ಇದು ಗಾಂಧೀಜಿ ಪ್ರತಿಪಾದಿಸಿದ ಭಾರತೀಯ ಸಮಾಜವಾದದ ವ್ಯಕ್ತಿ ಸ್ವರೂಪ. ಈ ನೀತಿಗೆ ಸಕಲ ಸಮರ್ಥನೆ ನೀಡುವುದು ಪ್ರಜ್ಞಾವಂತರ ಕರ್ತವ್ಯ. ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಯ ಯತ್ನದಲ್ಲಿ ಕೆಳಗಿನ ನಾಲ್ಕು ಅಂಶಗಳನ್ನು ಮುಖ್ಯವಾಗಿ ಗಮನಿಸಬೇಕು. ತಾಂತ್ರಿಕತೆ, ಆಧುನೀಕರಣ, ಮಾರಾಟ ವ್ಯವಸ್ಥೆ, ಮತ್ತು ಸಾಲದ ಸೌಲಭ್ಯ. ಈ ಅಂಶಗಳನ್ನು ಗಮನಿಸಿ ಅದಕ್ಕನುಸಾರವಾಗಿ ಕ್ರಮಗಳನ್ನು ಕೈಗೊಂಡಲ್ಲಿ ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಯೊಂದಿಗೆ ಜನಶಕ್ತಿಯ ಬಳಕೆಯೂ ಆಗುತ್ತದೆ. "ಜನಸ್ತೋಮದಿಂದ ಉತ್ಪಾದನೆ" ಎಂಬ ಗಾಂಧೀಜಿಯವರ ನುಡಿಯನ್ನು ನಿಜವಾಗಿಸಲು ಪ್ರತಿಯೊಬ್ಬರೂ ಗ್ರಾಮ ಕೈಗಾರಿಕೆಗಳನ್ನು ಬೆಂಬಲಿಸಬೇಕು. ಗ್ರಾಮ ಕೈಗಾರಿಕೆಗಳಿಂದಲೇ ಆರ್ಥಿಕ ಅಭಿವೃದ್ಧಿ ಎಂಬುದನ್ನು ಪ್ರತಿಯೊಬ್ಬರೂ ಅರಿಯಬೇಕು. ●

> ಒಂದು ಸಮಯದಲ್ಲಿ ಶುದ್ಧವಾದ
> ಹೃದಯವು ಏನು ಭಾವಿಸುತ್ತದೆಯೋ
> ಅದೇ ಸತ್ಯ. ಅದರ ಮೇಲೆ ಅಚಲವಾಗಿ
> ನಿಂತರೆ ನಿರ್ದುಷ್ಟವಾದ ಸತ್ಯವನ್ನು
> ಹೊಂದಲು ಸಾಧ್ಯ.
>
> —ಗಾಂಧೀಜಿ

ದೇವಪೂಜೆಯು ಮಾಟ, ದುರಿತ ಬಂಧನ ದೋಟ! ಶಂಭು ನಿಮ್ಮಯ ನೋಟದ ಕಣ್–ಬೇಟ!

ಸದಾ ಸನ್ನಿಹಿತನಾಗಿ ಶರಣೆಂಬುವುದು ಜಂಗ ಮಾರ್ಜನೆಯು ಮಾಟ ಕೂಡಲ ಸಂಗನ ಕೂಟ;

ಈ ವಚನಗಳ ಅರ್ಥದಲ್ಲಿ ಶಿವಾನುಭವ ಅರ್ಥ ಅಡಗಿದೆ. ಅದ್ದರಿಂದ ವಿದ್ಯಾವಂತರಾಗಿಯೇ ಶಿವಾನುಭವಿಗಳಾಗ ಬೇಕೆಂಬ ವಾದವೇನಾದರೂ ಇದ್ದರೆ ಅದೆಲ್ಲ ಸುಳ್ಳು. ಶಿವಾನುಭವವನ್ನು ಪ್ರತಿಯೊಬ್ಬನೂ ಅವನವನ ಸ್ಥಾನದಲ್ಲಿ ಮೈಗೂಡಿಸಿಕೊಳ್ಳಲು ಸಾಧ್ಯವೆಂಬುದನ್ನು ಎಲ್ಲರೂ ಅರಿಯ ಬೇಕು. (5 ನೇ ಪುಟ ನೋಡಿ)

( 12ನೇ ಪುಟದಿಂದ )

ವಹಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಕರ್ನಾಟಕ ರಾಜ್ಯದ ಆರೋಗ್ಯ ಮತ್ತು ಕುಟುಂಬಕಲ್ಯಾಣ ಇಲಾಖಾ ಸಚಿವರಾದ ಡಾ. ಹೆಚ್. ಎಲ್. ತಿಮ್ಮೇಗೌಡರು ವಹಿಸಿದ್ದರು. ಸಮಾರಂಭದಲ್ಲಿ ಅತಿಥಿಗಳಾಗಿ ಆಗಮಿಸಿದ್ದರು ಶಾಸಕರಾದ ಶ್ರೀ ಲಕ್ಷ್ಮೀನರಸಿಂಹಯ್ಯನವರು.

ಶ್ರೀ ಮಠದ ವಿದ್ಯಾಸಂಸ್ಥೆಗಳಲ್ಲಿ ಒಂದಾದ ಶ್ರೀ ಸಿದ್ಧಗಂಗಾ ಪ್ರೌಢಶಾಲೆ, ತುಮಕೂರು-ಇಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವ ರಾಜ್ಯಪ್ರಶಸ್ತಿ ವಿಜೇತರಾದ ಶ್ರೀ. ಎನ್. ಗುರುಮೂರ್ತಿಯವರಿಗೂ ಹಾಗೂ ಅದೇ ಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವ ಮತ್ತು ಗೃಹರಕ್ಷಕದಳದ ಅಧಿಕಾರಿಗಳಾಗಿ ರಾಷ್ಟ್ರಪ್ರಶಸ್ತಿ ಗಳಿಸಿರುವ ಶ್ರೀ. ಡಿ. ಜಯದೇವಪ್ಪನವರಿಗೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸುತ್ತದೆ.





# ವಿವಿಧ ಸಮಾರಂಭಗಳಲ್ಲಿ ಶ್ರೀ ಶ್ರೀ ಗಳವರು

12-8-84 ಬಟವಾಡೆ; ತುಮಕೂರು ಸೀಗೇಪುಡಿ ಮಿಲ್ ಆರಂಭೋತ್ಸವ.

13-8-84 ಲಕ್ಷ್ಮೀನಾರಾಯಣ ರೈಸ್ ಮಿಲ್ ಆರಂಭೋತ್ಸವ ಸಮಾರಂಭದ ಅಧ್ಯಕ್ಷತೆ, ಊರುಕೆರೆ ತುಮಕೂರು ತಾಲ್ಲೂಕು.

13-8-84 ತುಮಕೂರು ತಾಲ್ಲೂಕು ನರಸಾಪುರದಲ್ಲಿ ದೇವಸ್ಥಾನದ ಆರಂಭೋತ್ಸವದಲ್ಲಿ ಅಧ್ಯಕ್ಷತೆ.

14-8-84 ಬೆಂಗಳೂರಿನಲ್ಲಿ ಬಸಪ್ಪ ಕಾಂಪ್ಲೆಕ್ಸ್ ಆರಂಭೋತ್ಸವ ಕಾರ್ಯಕ್ರಮದಲ್ಲಿ.

19-8-84 ಚಾಮರಾಜನಗರ ತಾಲ್ಲೂಕು ಅಮಚವಾಡಿಯ ಕಾರ್ಯಕ್ರಮದಲ್ಲಿ;

21-8-84 ಕೊಳ್ಳೇಗಾಲದಲ್ಲಿನ ಕಾರ್ಯಕ್ರಮದಲ್ಲಿ.

24-8-84 ತುಮಕೂರು ಜಿಲ್ಲೆ, ಚೇಳೂರು ಹೋಬಳಿ, ಶಿರಗೇನ ಹಳ್ಳಿಯ ಶಾಲಾ ಆರಂಭೋತ್ಸವ ಸಮಾರಂಭದಲ್ಲಿ.

24-8-84 ತುಮಕೂರು ತಾಲ್ಲೋಕ್, ಮಲ್ಲಸಂದ್ರದ ಕೆ. ಡಿ. ಡಿ. ಸಿ ಯೂನಿಯನ್ ಆಫೀಸಿನ ಆರಂಭೋತ್ಸವದಲ್ಲಿ.

25-8-84 ವೆಂಕಟೇಶ್ವರ ಸ್ವಾಮಿ ವಿದ್ಯಾಕೇಂದ್ರ ಯಶವಂತಪುರ ಬೆಂಗಳೂರಿನ ಕಾರ್ಯಕ್ರಮದಲ್ಲಿ.

27-8-84 ಟಿ. ನರಸೀಪುರ ತಾಲ್ಲೂಕು ಬೆನಕನಹಳ್ಳಿಯ ಕಾರ್ಯಕ್ರಮದಲ್ಲಿ.

30-8-84 ದಾಸರ ಹಳ್ಳಿ, ಮಾಗಡಿ ರಸ್ತೆ ಬೆಂಗಳೂರಿನಲ್ಲಿ ಗಣೇಶನ ಪ್ರತಿಷ್ಠಾಪನೆ

31-8-84 ಬಸವನ ಪಾಳ್ಯ ಬೆಂಗಳೂರು ಜಿಲ್ಲೆ ಮಿಲ್‌ನ ಆರಂಭೋತ್ಸವ ಸಮಾರಂಭದಲ್ಲಿ.

2-9-84 ಬೆಂಗಳೂರಿನಲ್ಲಿ ಬಸವ ಜಯಂತಿ ಉತ್ಸವ ಸಮಾರಂಭದಲ್ಲಿ.

3-9-84 ಬೆಂಗಳೂರಿನ ಭವನದಲ್ಲಿ ಅಕ್ಕಮಹಾದೇವಿ ವಚನ ಸಂಗೀತದ ಕ್ಯಾಸೆಟ್ ಬಿಡುಗಡೆಯ ಸಮಾರಂಭದಲ್ಲಿ

5-9-84 ಗೂಳೂರು ಹೋಬಳಿ ನಂದಿಹಳ್ಳಿಯಲ್ಲಿ ದೇವಸ್ಥಾನದ ಆರಂಭೋತ್ಸವ.

5-9-84 ತುಮಕೂರಿನಲ್ಲಿರುವ ಕಾಮಧೇನು ಹೋಟೆಲ್ ಕಾರ್ಯಕ್ರಮದಲ್ಲಿ.

7-9-84 ತುಮಕೂರಿನಲ್ಲಿರುವ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಗಣೇಶೋತ್ಸವ ಸಮಾರಂಭದಲ್ಲಿ

8-9-84 ತುಮಕೂರಿನ ಸಿರಾಗೇಟಿನಲ್ಲಿ ಕಲ್ಯಾಣಮಂಟಪದ ಆರಂಭೋತ್ಸವದಲ್ಲಿ.

8-9-84 ಶ್ರೀ ಕ್ಷೇತ್ರದಲ್ಲಿ ಸಂಸ್ಕೃತೋತ್ಸವದ ಅಂಗವಾಗಿ ಶಾಸ್ತ್ರ ವಿಚಾರ ಸಂಕಿರಣ ಸಮಾರಂಭದಲ್ಲಿ

10-9-84 ಶ್ರೀ ಕ್ಷೇತ್ರದಲ್ಲಿ ಸಂಸ್ಕೃತೋತ್ಸವದ ಸಾರ್ವಜನಿಕ ಸಮಾರಂಭದಲ್ಲಿ

13-9-84 ಎಲೆರಾಂಪುರದಲ್ಲಿ ಗಣೇಶನ ಸಮಾರಂಭದಲ್ಲಿ.

13-9-84 ತುಮಕೂರಿನ ಸಿದ್ಧಗಂಗಾ ಕಾಲೇಜಿನ ಆವರಣದಲ್ಲಿ ಸಿದ್ಧಗಂಗಾ ಡಿ. ಫಾರ್ಮ್ಸ ಕಾಲೇಜಿನ ಆರಂಭೋತ್ಸವದಲ್ಲಿ

14-9-84 ತುಮಕೂರಿನಲ್ಲಿ ಕಾರ್ಪೋರೇಷನ್ ಬ್ಯಾಂಕ್‌ನ ಕಾರ್ಯಕ್ರಮದಲ್ಲಿ.

20-9.84 ಕಳ್ಳಂಬೆಳ್ಳ ಹೋಬಳಿ ಸಿರುಹಡಗು ಗ್ರಾಮದಲ್ಲಿ ದೇವಸ್ಥಾನದ ಸಾಮಾರಂಭದಲ್ಲಿ.

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

"ಮನೆ ನೋಡಾ ಬಡವರು, ಮನ ನೋಡಾ ಘನ ಮನ ಸಂಪನ್ನರು" ಎಂದಿದ್ದಾರೆ ಅಣ್ಣನವರು. ಅಂಥ ಸಂಪನ್ನರ ಊರು ಪುಟ್ಟಸಂದ್ರ. ಕೊರಟಗೆರೆ ತಾಲ್ಲೂಕಿನ ಒಂದು ಪುಟ್ಟ ಗ್ರಾಮ. ಬಾಳೆ, ಅಡಿಕೆ, ಭತ್ತಗಳಿಗೆ ಹೇಳಿಮಾಡಿಸಿದ ಭೂಮಿ ಅಲ್ಲಿಯದು. ಅಲ್ಲಿ ಬಸವ ಜಯಂತಿ ತಾ|| 22–4–84 ರಂದು ಊರಿಗೆ ಊರೇ ಮಿಂದು ಮಡಿಯುಟ್ಟಿತು. ಮನೆ ಮನೆಯ ಮುಂದೆ ಸಾರಣೆ ಕಾರಣೆ, ಚಿತ್ತಾಕರ್ಷಕ ರಂಗೋಲಿ. ಭಕ್ತಿಯ ತೆನೆ ತೂಗಿದುವು ಎಲ್ಲೆಲ್ಲೂ, ಪರಮ ಪೂಜ್ಯ ಶ್ರೀ ಶ್ರೀಗಳವರಿಗೆ ತುಂಬು ಭಕ್ತಿಯ ಸುಸ್ವಾಗತ. ಊರಿನ ತುಂಬ ಎಲ್ಲಿಲ್ಲದ, ಎಂದೂ ಇಲ್ಲದ ಸಡಗರ, ಸಂಭ್ರಮ.

ಕಾರ್ಯಕ್ರಮ10-30ಕ್ಕೆ ಪ್ರಾರಂಭ. ಸೊನ್ನಲಿಗೆ ಕರ್ಮಯೋಗದ ಕೇಂದ್ರ, ಬಳ್ಳಿಗಾವೆ ಜ್ಞಾನಯೋಗದ ಕೇಂದ್ರ, ಕಲ್ಯಾಣ ಭಕ್ತಿಯೋಗದ ಕೇಂದ್ರವಾಗಿದ್ದ ಕಾಲ ಹನ್ನೆರಡನೆಯ ಶತಮಾನ. "ಅತ್ತಲಿತ್ತ ಹೋಗದಂತೆ ಹೆಳವನಾಗಿ—ಮಾಡಯ್ಯ ತಂದೆ" ಎನ್ನು—ತ್ತ ಬಸವಣ್ಣ ವೀರಶೈವ—ಜನಾಂಗದ ಹೃದಯ ಮಂಟಪವಾಹ ಅನುಭವ ಮಂಟಪ ನಿರ್ಮಾಣಮಾಡಿ, ಆಧ್ಯಾತ್ಮಿಕ ಜಗತ್ತಿನ ಪ್ರಪ್ರಥಮ ಲೋಕ ಸಭೆಯನ್ನು ಸಮಾವೇಶಗೊಳಿಸಿದ. ಮುಗ್ಧರಿಗೆ, ವಿಚಾರಶೀಲರಿಗೆ, ಶ್ರದ್ಧಾ ಜೀವಿ



ಗಳಿಗೆ ಪ್ರಿಯನಾದ ಬಸವಣ್ಣ ಮನುಕುಲದ ಮಾಂಗಲ್ಯವಾದ ಎಂದು ನುಡಿದರು. ಶ್ರೀ ಬಿ. ವೀರಭದ್ರಯ್ಯನವರು.

ಬಸವಣ್ಣ ಬಾಲ್ಯದಿಂದಲೇ ವೈಚಾರಿಕ ಮನೋಧರ್ಮಿಯಾಗಿ ಬೆಳೆದುಬಂದವನು. ಜಗತ್ತಿನ, ಸಮಾಜದ ಆಗು-ಹೋಗುಗಳನ್ನು, ಓರೆ-ಕೋರೆಗಳನ್ನು, ನ್ಯಾಯ-ಅನ್ಯಾಯಗಳನ್ನು ಕುರಿತು ಚಿಂತನ ಮಂಥನ ನಡೆಸುತ್ತಿದ್ದವನು. ಗಂಡು ಜನಿವಾರ ಧರಿಸುವುದಾದರೆ ಹೆಣ್ಣೇಕೆ ಧರಿಸಬಾರದು ? ಎಂಬ ಪ್ರಶ್ನೆ ಅವನದು. ಅಲ್ಲದೆ "ಕರ್ಮ ಲತೆಯಂತಿರ್ದ" ಜನಿವಾರವೇ ಬೇಡ ಎಂದು ದಿಟ್ಟವಾಗಿ ನಡೆದುಕೊಂಡವನು. "ವಿಪ್ರರು ನುಡಿವುದೊಂದು ಪರಿ, ನಡೆವುದೊಂದು ಪರಿ" ಎಂದು ನಿರ್ಭಿಡೆಯಿಂದ ಹೇಳಿದವನು—ಎಂಬುದಾಗಿ ಮಾತನಾಡಿದರು ಶ್ರೀ ಕೆ. ಪಿ. ಶಿವಲಿಂಗಯ್ಯನವರು.

ಬಸವಣ್ಣನವರ ಜನನವಾದದ್ದೇ ಜನಪದರ ಉದ್ಧಾರಕ್ಕಾಗಿ, ಬಡವರನ್ನು ಬಾಚಿ ತಬ್ಬಿಕೊಂಡ, ದಲಿತರಿಗೆ ದನಿಯಾಗಿ ಬಂದ, ದೀನರಿಗೆ ಆಶಾಕಿರಣವಾದ ಪುಣ್ಯಜೀವಿ ಬಸವಣ್ಣ. ಆ ಮಹಾನುಭಾವಿ ಮಾಡಿದ ಸುಧಾರಣೆಯ ಫಲವಾಗಿ, ಗ್ರಾಮೀಣ ನಿರಕ್ಷರಿಗಳ ಪವಿತ್ರ ಜೀವನದ ಮಂಗಳ ಮುಕ್ತಕಗಳಾಗಿ ಹೊಮ್ಮಿದುವು ಜನಪದ ತ್ರಿಪದಿಗಳು ಎಂದರು ಶ್ರೀ ಹೆಚ್. ವಿ. ವೀರಭದ್ರಯ್ಯನವರು.

ಮಧ್ಯಾಹ್ನದ ಅಧಿವೇಶನದಲ್ಲಿ ಜಿಲ್ಲಾ ಜನತಾ ಪಕ್ಷದ ಕಾರ್ಯದರ್ಶಿಗಳಾದ, ಶೀತಾ ಗ್ರಾಮದ ಶ್ರೀ ಚೆನ್ನಪ್ಪನವರು ಮಾತನಾಡುತ್ತ ಸಿದ್ಧಗಂಗಾ ಸ್ವಾಮಿಗಳು ಮಾಡುತ್ತಿರುವ ಸೇವೆ ಅಖಂಡ ಮನುಕುಲಕ್ಕೇ ಆದರ್ಶಪ್ರಾಯವಾಗಿದೆ. ಬಡವರ ಭಾಗಿಲಿಗೆ ಬಂದು ಬಸವತತ್ವ ಪ್ರಚಾರ ಮಾಡುತ್ತಿರುವ ಶ್ರೀ ಶ್ರೀಗಳವರ ಸಮಾಜ ಪ್ರೇಮ, ಬಸವನಿಷ್ಠೆ ಅಸದೃಶವಾದುದು ಎಂದು ಮುಕ್ತಕಂಠದಿಂದ ಭಕ್ತಿ ಕುಸುಮಾಂಜಲಿಯರ್ಪಿಸಿದರು.

ಭರತ ಖಂಡದ ಸಮಸ್ಯೆಗಳಿಗೆ ಇರುವ ಏಕೈಕ ಪರಿಹಾರವೆಂದರೆ We must go back to Basava ಎಂಬ ಗಜೇಂದ್ರಗಡ್‌ಕರ್ ಅವರ ಹೇಳಿಕೆಯನ್ನು ಉಲ್ಲೇಖಿಸಿದ ಪರಮ ಪೂಜ್ಯ ಶ್ರೀ ಶ್ರೀಗಳವರು ಬಡತನದ ಬವಣೆ ದೂರಾಗಬೇಕಾದರೆ ಬಸವಣ್ಣನವರು ಆಚರಿಸಿ ತೋರಿಸಿದ ಕಾಯಕ ಮತ್ತು ದಾಸೋಹ ಮಾರ್ಗಗಳೇ ಸಮರ್ಥ ಮಾಧ್ಯಮಗಳು ಎನ್ನುತ್ತ ತನುಕರಗಿ, ಮನಮರುಗಿ, ಭಾವವರಳಿ, ಕ್ರಿಯಾಶೀಲರಾದ ಜನತೆಯನ್ನು ರೂಪಿಸಿದ ಮಹಾ ಶಿಲ್ಪಿ ಬಸವಣ್ಣ ಎಂದರು. ಮುಂದುವರಿದು, ಆತ್ಮ ವಿಶ್ವಾಸದ ಸಮಾಜವನ್ನು ಅನುಭವದ ಆಧಾರದ ಮೇಲೆ ನಿರ್ಮಾಣ ಮಾಡುವ ಕಲೆಯನ್ನು ಜಗತ್ತಿಗೆ ತೋರಿಸಿಕೊಟ್ಟ ಅದ್ಭುತ ಕಲಾವಿದ ಬಸವಣ್ಣ. ಆತ ಬೋಧಿಸಿದ, ಆಚರಿಸಿದ ಕಲೆ, ಎಲ್ಲ ಕಲೆಗಳ ಕಲೆ ಎನ್ನಬಹುದಾದ ಜೀವನಕಲೆ. ಜೀವನವನ್ನೇ ಶಿವಯೋಗದೆತ್ತರಕ್ಕೆ ಎತ್ತಿದ ವಿನೂತನ ಕಾರಣಿಕ, ಸಾಮರ್ಥ್ಯವಂತ

ಎಂದು ವಿಮರ್ಶಿಸಿದರು.

ಜಗಜ್ಜ್ಯೋತಿ ಬಸವೇಶ್ವರ ನಾಟಕ ಅಭಿನಯಿಸಲಾಯಿತು. ಸುಮಾರು ಇಪ್ಪತ್ತು ಸಹಸ್ರ ಮಂದಿ ನಾಟಕ ನೋಡಿದರು. ಈ ವರದಿಗಾರ ಮಧ್ಯೆ ಎದ್ದು ಬಂದಾಗ ಕೇಳಿಸಿದ ಮಾತು "ಒಂದು ಬೀಡಿ ಕೊಡ್ತೀಯಾ ತುಂಬಾ ಚಳಿಯಾಗ್ತಿದೆ." ಇನ್ನೊಬ್ಬ ಹೇಳ್ತಿದ್ದ "ನಮ್ಮಪ್ಪ ಬಿಡ್ತು ಅನ್ನು, ಸ್ವಾಮಿಗಳು ಕುಂತವ್ರೆ ಅವ್ರು ಮುಂದೆ ಬೀಡಿ ಸೇದೋಣ ಅಂದ್ರೇನು?" ಜನರಲ್ಲಿ ಅದರಲ್ಲಿಯೂ ಹಳ್ಳಿಯ ಮುಗ್ಧ ಬಂಧುಗಳಲ್ಲಿ ಇನ್ನೂ ಗುರು-ಹಿರಿಯರ ಬಗ್ಗೆ ಗೌರವ-ಭಕ್ತಿ ಬತ್ತಿ ಹೋಗಿಲ್ಲ ಎನಿಸಿತು. ನಾಟಕ ಮುಗಿದಾಗ ಪುಟ್ಟಸಂದ್ರದ ಕೋಳಿಗಳು ಹತ್ತು ದಿಕ್ಕಿಗೆ ಕೊರಳೆತ್ತಿ ಕೂಗುತ್ತಿದ್ದವು ಬಸವ ಸಂದೇಶ ಕೇಳಿಸಿಕೊಳ್ಳಿ ಎನ್ನುವಂತೆ. ಇಪ್ಪತ್ತು ಸಾವಿರ ಜನ ಸಾಗಲು ಹಳ್ಳಿಯ ದಾರಿಗೆ ಶಕ್ತಿ ಸಾಲದಾಗಿತ್ತು. ಎಲ್ಲೆಂದರಲ್ಲೇ ದಾರಿ ಬಿಟ್ಟು ನಡೆಯುತ್ತಿದ್ದರು. ದಾರಿ ಬಿಟ್ಟಿದ್ದರು, ಆದರೆ ದಾರಿ ಹಿಡಿದಿದ್ದರು ಗುರು ತೋರಿದ ದಾರಿಯನ್ನು—ಸ್ವಾಮಿಗಳ ಕಾರು ಮುಂದೆ ಬಂದಾಗ ಜನ ಹಿಂದೆ ಓಡಿಬರುತ್ತಿದ್ದುದು ಕಾಣಿಸುತ್ತಿತ್ತು.

ಆಮೇಲೆ ಪುಟ್ಟಸಂದ್ರದ ತಾಯಿಯೊಬ್ಬಳು ಹೇಳಿದಳೆಂದು ತಿಳಿಯಬಂದಿತು. "ಎಷ್ಟು ರೂಪಾಯಿ ಖರ್ಚಾದರೂ ಚಿಂತೆಯಿಲ್ಲ ಮುಂದಿನ ವರ್ಷವೂ ಬಸವ ಜಯಂತಿ ನಮ್ಮೂರಿನಲ್ಲಿ ನಡೆಸಬೇಕು"–ಎಂಬುದಾಗಿ. ಮತ್ತೊಂದು ಸಾರ್ಥಕ ನುಡಿ ಬಸವಣ್ಣನ ಪಾತ್ರಧಾರಿ ಬಂಧು ಸಿದ್ಧಗಂಗಪ್ಪ "ಹುಟ್ಟೂರಿನಲ್ಲಿ ಬಸವಣ್ಣನ ಪಾತ್ರ ಮಾಡಿದೆ, ಜನ್ಮ ಸಾರ್ಥಕವಾಯಿತು" ಎಂದಾಗ ಶ್ರೀ ಶ್ರೀಗಳವರ ಅನುಗ್ರಹವೇ ಮಾತಿನ ರೂಪದಲ್ಲಿ ಆಶೀರ್ವದಿಸಿದಂತಾಗಿತ್ತು.

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.